## ಮುನ್ನುಡಿ

**' ಶಿವಾನಂದ ಲಹರೀ '** ಎಂಬ ಸಂಸ್ಕೃತ ಗ್ರಂಥವು ಶಂಕರಾಚಾರ್ಯ
ಂದ ರಚಿತವಾದುದೆಂದು ಗಣಿಸಲ್ಪಟ್ಟಿದೆ. * ಈ ಶಿವಾನಂದ ಲಹರಿಯಲ್ಲಿ
ಚಾರ್ಯರ ನಿರ್ಭರಭಕ್ತಿಭಾವ ಆನಂದ ರಸದ ಲಹರಿಯಾಗಿ ಮೂಡಿ,
ಭಕ್ತಿಯ, ಹೃದಯಸೌಂದರ್ಯದ ನಾನಾ ಮುಖವನ್ನು ಸ್ಫುಟಗೊಳಿಸಿದೆ.
ಷಯದಾಶೆಯಲ್ಲಿ ವ್ಯರ್ಥವಾಗಿ ಸತ್ತುಹೋಗುವ ಮಾನವ ಜೀವನ ಶಿವಾ
ಕ್ಷೆಯಲ್ಲಿ ಚೈತನ್ಯಗೊಂಡು ಅನನ್ಯವಾದ ಶಿವಭಕ್ತಿಯಿಂದ ಪ್ರಜ್ವಲಿಸಿದರೆ
ವನವೆಲ್ಲ ಶಿವಾನಂದವಾಗುತ್ತದೆ. ವಿಷಯ ಸುಖವನ್ನುಳಿದು ' ನಿತ್ಯಾನಂದ
ಾಲಯ ' ನಾದ ಶಿವನಲ್ಲಿ ಮನ ಬುದ್ಧಿ ಭಾವಗಳೆಲ್ಲ ಮುಳುಗಿದರೆ ಜೀವನ
ನು ಪಾವನವಾಗುತ್ತದೆ.

ಭಕ್ತಿಯಿಂದ ಪ್ರೇರಿತವಾದ ಮಾನವನ ಹೃದಯದ ಒಕ್ಕೊರಲಿನ ಕೂಗೇ
ಾನಂದ ಲಹರಿಯಾಗಿ ಸಂಸ್ಕೃತಭಾಷೆಯಲ್ಲಿ ಮಿಂಚಿದೆ. ಈ ಲಹರಿಯನ್ನು
ುಭವಿಸುವವರು ಸಂಸ್ಕೃತವನ್ನು ಬಲ್ಲ ಸದುಹೃದಯರಾದ ಸಹೃದಯರು
ಾತ್ರ. ಸಂಸ್ಕೃತ ಭಾಷೆಯರಿಯದ ಕನ್ನಡಿಗರ ಹೃದಯಕ್ಕೆ ಆ ಲಹರಿಯ
ಾಸವನ್ನು ತೋರಬಾರದೇಕೆ ಎಂಬ ಲವಲವಿಕೆಯೇ ಈ ಕನ್ನಡ ಶಿವಾನಂದ
ಹರಿಯನ್ನು ಕನ್ನಡಿಗರಿಗೆ ನೀಡಿದೆ. ಇಂತಹ ಲವಲವಿಕೆ ಮೂಡುವದು
ಮಾನ್ಯ ಹೃದಯದಲ್ಲಲ್ಲ. ಆ ಹೃದಯದಲ್ಲಿ ಶಂಕರಾಚಾರ್ಯರ ಹೃದಯದ
ೆ ಅವಶ್ಯವಿರಬೇಕು. ಇಲ್ಲವಾದರೆ ಇಂತಹ ಸಾಹಸಕ್ಕೆ ಹೃದಯ
ಯುತ್ತಿದ್ದಿಲ್ಲ.

ಶಿವಾನಂದ ಲಹರಿಯನ್ನು ಕನ್ನಡಕ್ಕೆ ಅನುವಾದಿಸಿದವರು **ಶ್ರೀಯುತ
ರಪ್ಪ ನಾಗಸೆಟ್ಟಿಯವರು.** ಶಿಖರಿಣಿ, ಶಾರ್ದೂಲ ವಿಕ್ರೀಡಿತ, ಸ್ರಗ್ಧರಾ,
ಶಸ್ಥ ಮುಂತಾದ ಸಂಸ್ಕೃತ ವೃತ್ತಗಳಲ್ಲಿ ಬರೆದಿರುವ ಶಿವಾನಂದ ಲಹರಿ
ನ್ನು ಶ್ರೀ. ನಾಗಸೆಟ್ಟಿಯವರು ಚಂಪಕಮಾಲಾ, ಉತ್ಪಲಮಾಲಾ,
ತ್ತೇಭವಿಕ್ರೀಡಿತ, ಮಹಾಸ್ರಗ್ಧರಾ, ತರಳ ಎಂಬ ವೃತ್ತ ಛಂದಸ್ಸಿನಲ್ಲಿ

* ಇದೇ ಶಂಕರಾಚಾರ್ಯರಿಂದ ರಚಿತವಾದುದೆಂದು ಪ್ರತೀತಿಯಿರುವ ' ಆನಂದ
ರೀ ' ಎಂಬ ಬೇರೊಂದು ಗ್ರಂಥವೂ ಇದೆ. ಪ್ರಬುದ್ಧ ಕರ್ನಾಟಕ ೧೪೦, ೧೪೩,
', ಸಂಚಿಕೆಗಳು

ಮತ್ತು ವಾರ್ಧಿಕ ಷಟ್ಪದಿ, ಭಾಮಿನಿ ಷಟ್ಪದಿ, ಪರಿವರ್ಧಿನಿ ಷಟ್ಪದಿಗಳೆಂಬ
ಛಂದಸ್ಸಿನಲ್ಲಿ ಅಲ್ಲದೆ ಕೆಲವು ಕಂದಪದ್ಯಗಳಲ್ಲಿ ಪರಿವರ್ತಿಸಿದ್ದಾರೆ
ಕಾವ್ಯವನ್ನು ಕನ್ನಡ ಕಾವ್ಯವನ್ನಾಗಿ ಭಾಷಾಂತರಗೊಳಿಸಿದ್ದರೂ,
ಕಾವ್ಯದ ಸುಭಗಸೌಂದರ್ಯವನ್ನು ಕನ್ನಡ ಕಾವ್ಯದಲ್ಲಿಯೂ ಮೂ
ಸಿದ್ದಾರೆ ಕವಿ ನಾಗಸೆಟ್ಟಿಯವರು. ಶಂಕರಾಚಾರ್ಯರ ಶಿವಾನಂದ
ಪದ್ಯಶತಕದ ವಿಷಯವನ್ನು ಕನ್ನಡ ಕವಿ ಕನ್ನಡ ಶತಕದಲ್ಲಿ ಅನು
ವಾಗಿ, ಪದ್ಯಕ್ಕೆ ಪದ್ಯ ಸರಿಯಾಗಿ, ಹೊಂದಿಕೆಯಾಗಿ, ಮೂಡಿಸಿ ಕೃತ
ರಾಗಿದ್ದಾರೆ. ಸಂಸ್ಕೃತ ಛಂದಸ್ಸಿನ ವೃತ್ತಗಳಲ್ಲಿ ಪದ್ಯರಚಿಸುವದು
ನುಡಿಯಲ್ಲಿಯೇ ಆಗಲಿ-ಕಠಕಷ್ಟ. ಸಣ್ಣ ಪುಟ್ಟ ನಾಡಾಡಿ ಕವಿಗ
ವನ್ನನುಲಕ್ಷಿಸಿ, ನಾವೀಮಾತನ್ನು ಹೇಳುತ್ತಿಲ್ಲ. ಇಂದು ದೊಡ್ಡ ಕವಿ
ಪ್ರಖ್ಯಾತಿ-ಪಡೆದವರಿಗೂ ಈ ಕಾರ್ಯ ದುಷ್ಕರ, ದುಸ್ಸಾಧ್ಯ ಇಲ್ಲನೆ
ರೀತಿಯಿಂದ ಅಸಾಧ್ಯವೆಂದರೂ ಬಹಳ ತಪ್ಪಾಗಲಿಕ್ಕಿಲ್ಲ. ಇಂತಹ
ವಾದ ಕೆಲಸವನ್ನು ಕವಿ ನಾಗಸೆಟ್ಟಿಯವರು ಸಮರ್ಥವಾಗಿ ನಿ
ಕನ್ನಡಿಗರ ಪ್ರೇಮ, ಆದರ, ಗೌರವವನ್ನು ಪಡೆವ ಅರ್ಹತೆಯನ್ನು
ಕಾವ್ಯಶಕ್ತಿಯಿಂದ ಸಂಪಾದಿಸಿಕೊಂಡಿದ್ದಾರೆ.

ಸಂಸ್ಕೃತ ಭಾಷೆಯ ಶೈಲಿಯ ಮಧುರ, ಗಂಭೀರ, ಸ್ಫುಟ,
ಮುಂತಾದವು ಸಂಸ್ಕೃತಕ್ಕೆ ವಿಶಿಷ್ಟವಾದ ಗುಣಗಳೇ ಪ್ರತಿ ವ್ಯಕ್ತಿಗೆ ವಿಶಿ
ಗುಣ ಸ್ವಭಾವಗಳಿರುವಂತೆ, ಪ್ರತಿ ಭಾಷೆಗೂ ತನ್ನದೆ ಆದ ವಿಶಿಷ್ಟ
ಪೊಂದಿರುತ್ತದೆ. ಸಂಸ್ಕೃತಕ್ಕಿರುವಂತೆ ಕನ್ನಡ ಭಾಷೆಯ ಬೆಡಗು
ತಾನೊಂದು ಬೇರೆ. ಸಂಸ್ಕೃತ ಶಿವಾನಂದ ಲಹರಿಯನ್ನೋದುವಾಗ ಇಲ್ಲ
ವಾಗ ಗೀರ್ವಾಣ ಭಾಷೆಯ ಮಂಜುಲ ನಿನಾದವು ಸಹೃದಯರ ಹೃದ
ಆವರಿಸುವುದು ನಿಜ. ಆದರೂ ಕನ್ನಡ ಶಿವಾನಂದ ಲಹರಿಯ ಪದ
ಕೇಳುವಾಗ ಕನ್ನಡ ಕಾವ್ಯವಾಣಿಯ ವಿಲಾಸ ರಸಿಕರ ಹೃದಯವನ್ನು
ತ್ತದೆಂಬ ಮಾತು ಸತ್ಯ.

ಮ. ವಿ. ಪಲಸೂಳ್ ಪ್ರಾರ್ಥಿಸಿದೆಂ, ಸಮರ್ಚಿಸಿದೆನೊಳ್ಪಿಂ ವಂದನಂಗೆಯ್ದೆ ಸ
ನಲವಿಂ ಧ್ಯಾನ ಸಮಾಧಿಯಾಂತೆನಕಟಾ! ನೀನೊಲ್ದುದಿಲ್ಲಿನ್ನೆಗಂ ॥
ಸಲೆ ಪೇಳ್ ನೀಂ ಪರಿತುಷ್ಟನಪ್ಪ ಬಗೆಯಂ? ಪೇಳ್ದಂತೆ ನಾಂ ಗೆಯ್ವ
ಶಿಲೆಯಿಂದೋ! ಧನುವಿಂದೊ ಮೇಣೊಸಕೆಯಿಂದೋ ಪೇಳ್ ಭವಾನೀ

|| ಆದ್ಯಂಗಗಣ್ಯ ತೇಜೋನಿಧಿಗೆ ನಿಗಮವಾ ।
ಗ್ವೇದ್ಯಂಗೆ ಸಂತತಂ ಮೂಲೋಕಮಂ ರಕ್ಷಿ ।
ಪುದ್ಯೋಗದೊಳ್ ತೊಡಗಿದಂಗೆ, ಸುರನಿಕರಗೇಯಂಗೆ ನಾರಾಯಣಾಯುತಂಗೆ ||
ಸದ್ಯೋಗಿ ಸಂಕುಲಧ್ಯೇಯಂಗೆ ಸದ್ಭಕ್ತ ।
ಸಾಧ್ಯಂಗೆ ಸಚ್ಚಿದಾನಂದ ರೂಪಂಗೆ ನಿರ ।
ವದ್ಯ ತಾಂಡವ ಸಂಭ್ರಮಂಗೆ ನಮಿಪೆಂ ಜಟಾಜೂಟಂಗೆ ಶ್ರೀಶಂಭುಗೆ || ೫೫ ||

ವಿ. ಹರನೇ । ಮೌಢ್ಯದೆ ನಿನ್ನನೋಲಯಿಸದೀ ನಿಸ್ಸಾರ ಸಂಸಾರದೊಳ್ ||
ತಿರುಗುತ್ತಿರ್ದನನೆನ್ನನೋವುದುಚಿತಂ । ಕಾರುಣ್ಯದಿಂದಂಧನಂ ||
ಪೆರನೆನ್ನಿಂ ನಿನಗಾವನಿರ್ಪನತಿ ದೀನಂ ? । ದೀನ ಸಂರಕ್ಷಣಾ ||
ಪರ । ನಿನ್ನಿಂದೆನಗಾರ್ ಶರಣ್ಯರಿಪರನ್ಯರ್ ಸಾಂಬ ಮೂಲೋಕದೊಳ್ ||೧೭||

ಈ ಮುಂತಾದ ಪದ್ಯಗಳನ್ನು ಓದಿದರೆ, ಕೇಳಿದರೆ ಮೇಲೆ ಹೇಳಿದ ಮಾತಿನ ರ ರಸಾನುಭಾವಿಗಳಿಗೆ ಆಗದಿರದು. ಕಾವ್ಯವಿಲಾಸದ ಸೂತ್ರವನ್ನು ಬಿಡದೆ ನಿರುವ ಕನ್ನಡದ ಶಿವಾನಂದ ಲಹರಿಯ ನೂರು ಪದ್ಯಗಳು ಕನ್ನಡ ಕಾವ್ಯ ತೆಯ ಅಡಿಯಲ್ಲಿ ಅಲಂಕಾರವಾಗಿ ಬಾಳಬಲ್ಲವು.

ಶ್ರೀ. ನಾಗಸೆಟ್ಟಿ ವೀರಪ್ಪನವರು ಹುಟ್ಟಿದೂರು 'ಹುಲಿಕೇರಿ'. ಮೊದಲು ಾಂವಿ ಜಿಲ್ಲೆಯಲ್ಲಿದ್ದ ಈ ಊರು ಇಂದು ಧಾರವಾಡ ಜಿಲ್ಲೆಗೆ ಸೇರಿಸಲ್ಪ. ಆಳಣಾವರದಿಂದ ಉತ್ತರಕ್ಕೆ ೪ ಮೈಲು ದೂರದಲ್ಲಿದೆ. ಈ ಊರಿಗೆ ಲಿಕೇರಿ' ಎಂಬ ಹೆಸರು ಬರಲು ಕಾರಣವೇನೆಂಬುದನ್ನು ತಮ್ಮೂರನ್ನು ಪದ್ಯಗಳಿಂದ ಬಣ್ಣಿಸಿದ ಶ್ರೀ ವೀರಪ್ಪನವರು ಕೆಳಗಿನ ಪದ್ಯದಲ್ಲಿ ಹೇಳಿದ್ದಾರೆ.

ಪೂರ್ವದೊಳೊಮ್ಮೆಯಿಾ ನಗರವಾಸಿ ಜನರ್ಕಳಿಗೀ ಪುರೋತ್ತರ ।
ಪೂರ್ವದಿಶಾ ಪ್ರದೇಶಗಳೊಳಿರ್ಪ ಗಿರಿಸ್ಥಿತ ವ್ಯಾಘ್ರಗಳ್ ಸದಾ ।
ದುರ್ವಹಮಪ್ಪ ತ್ರಾಸಗುಡೆ ತಚ್ಛಮನಾರ್ಥ ಮೆ ಕೆತ್ತಿಸಿಟ್ಟಹ ।
ಪೂರ್ವದೊಳುತ್ತರಾಶೆಯೊಳು ಕಲ್ಗಳ ಬಗ್ಗಗಳೆಯ್ದೆ ರಂಜಿಕುಂ || ೧೧ ||

ಶ್ರೀ ವೀರಪ್ಪನವರು ಹುಟ್ಟಿದುದು, ಕ್ರಿ. ಶ. ೫-೭-೧೮೭೫ ರಂದು. ಆ ಕನ್ನಡ ಸಾಹಿತ್ಯ ತನ್ನ ಸುದೀರ್ಘ ನಿದ್ರೆಯಿಂದೆಚ್ಚತ್ತು ನವೋದಯದಲ್ಲಿ ತಲು ಹವಣಿಸುತ್ತಿದ್ದ ಕಾಲ. ಶ್ರೀ. ವೀರಪ್ಪನವರು ತಮ್ಮ ಪ್ರಾಥಮಿಕ ವನ್ನು ಹುಲಿಕೇರಿಯಲ್ಲಿ ಮತ್ತು ಕಿತ್ತೂರಲ್ಲಿ ಪಡೆದರು. ಬಡತನದ ಯು ಇವರ ಶಿಕ್ಷಣವ [illegible] ಪ್ರೇಮದಿಂದ ಗೊಂಡು, ಕ್ರಿ. ಶ. [illegible] ರಿಗೆ ಅಂತೂ



ಇಂತೂ ನಡೆದು, ಮತ್ತೆ ಕುಂಠಿತವಾಯಿತು. ಸ್ಕಾಲರಶಿಪ್ ಪರಿ
ವಿಜಯಿಯಾದ ತೀಕ್ಷ್ಣಬುದ್ಧಿಯು ಅಂದಿನ ವಿದ್ಯಾರ್ಥಿಗಳ ಅಂದಿನ
ಹೇಗಿದ್ದಿರಬಹುದೆಂಬುದರ ಕಲ್ಪನೆಯನ್ನು ಇವರ ಜೀವನ ಸ್ಪಷ್ಟವಾಗಿ
ತ್ತದೆ. ವಿಷಮ ವಾತಾವರಣದಿಂದಲೂ ಎದೆಗೆಡವೆ ಇವರು ತಮ್ಮ ವಿದ
ವನ್ನು ಮುಂದುವರಿಸಿ ಕ್ರಿ. ಶ. ೧೮೯೯ರಲ್ಲಿ ಟ್ರೇನಿಂಗ ಕಾಲೇಜದಲ್ಲಿ
ತರಬೇತಿ ಹೊಂದಿ ಮೊದಲು ಬೈಲುಹೊಂಗಲದ ಶಾಲೆಯಲ್ಲಿ ಶಿಕ್ಷಕ
೭-೮ ಊರಲ್ಲಿ ಕೆಲಸಮಾಡಿ ತಾವು ಕಲಿತ ಕಿತ್ತೂರಲ್ಲಿ ಮುಖ್ಯ ಅ
ರಾಗಿ ಕೆಲಸಮಾಡಿ, ಕ್ರಿ. ಶ. ೧೯೩೪ರಲ್ಲಿ ನಿವೃತ್ತರಾದರು.

ಶ್ರೀ. ವೀರಪ್ಪನವರದು ಸರಳ ಜೀವನ, ಸಾಧು ಜೀವನ; ಪ್ರಾ
ಜೀವನ. ವಿದ್ಯಾಪ್ರೇಮ ಕಾವ್ಯವ್ಯಾಸಂಗದಿಂದ ತುಂಬಿದ ಜೀವನ. ಕಿ
ಓದುತ್ತಿದ್ದಾಗ ಇವರಿಗೆ ತಕ್ಕ ಗುರು. ಶ್ರೀ. ಬಸವಾರ್ಯ ಕಂಬಿ ಎ
ದೊರೆತರು. ಅವರು ಕಾವ್ಯ ಪ್ರೇಮಿಗಳು. ಸ್ವತಃ ಕವಿಗಳು. ಅವರ
ತೇಜವೇ ಇವರ ಹೃದಯಕ್ಕೆ ದೀಪಹಚ್ಚಿ ಬೆಳಗು ನೀಡಿತು. ಶ್ರೀ.
ನವರ ಕಾವ್ಯದ ಗಭೀರ ಭಕ್ತಿ ನಮಗೆ ತಿಳಿದುದು 'ಗುರುರಾಜ
ವನ್ನು ಸಂಸ್ಕರಿಸುವ ಸಂದರ್ಭದಲ್ಲಿ. ಆ ಕಾರ್ಯದಲ್ಲಿ ಇವರು ನೀಡಿದ ಸ
ಕೊಟ್ಟ ಸಲಹೆ 'ಇಂಗ್ಲಿಷ ಕಲಿತವರೇ ಸ್ಯಾಣೇರು' ಎಂಬ ಅಹಂಭಾ
ಸಡಲಿಸಿದುವು. ಬೂದಿ ಮುಚ್ಚಿದ ಕೆಂಡದಂತೆ ಎಷ್ಟೊಂದು ಬುದ್ಧಿ
ಕಾವ್ಯಪರಿಣತರು, ಕನ್ನಡ ರತ್ನಗಳು ನಮ್ಮ ನಾಡಿನಲ್ಲಿವೆಯಲ್ಲಾ !
ವಿಸ್ಮಯ ಹೃದಯವನ್ನು ಆಗಲಮಾಡಿತು.

ಶ್ರೀ. ವೀರಪ್ಪನವರ ಜೀವನ, ಕಷ್ಟನಷ್ಟವನ್ನನುಭವಿಸಿದೆ.
ಸ್ಥಿತಪ್ರಜ್ಞತೆಯ ಸಮತೆಯಲ್ಲಿ ಇಂದಿಗೂ ಸುಖವಾಗಿ ಸುಂದರವಾಗಿ,
ಲಲಿತವಾಗಿ ಕಂಗೊಳಿಸುತ್ತಿದೆ. ಮಹತ್ವಾಕಾಂಕ್ಷೆಯ ಸೋಂಕಿಲ್ಲದ
ಸಾತ್ವಿಕ ಜೀವನ ಪುರಾಣ ಪುಣ್ಯಕಥೆಕೇಳುವದು ಭಾವ ಉಕ್ಕಿ ಶಿವ
ಪದ್ಯಗಳನ್ನು ರಚಿಸುವದು, ಪುರಾತನ ಮತ್ತು ಆದ್ಯತನ ಕಾವ್ಯ
ಓದುವದು, ಉತ್ತಮ ಕಾವ್ಯಭಾಗಗಳನ್ನು ಬರೆದು ಸಂಗ್ರಹಿಸಿಕೊಳ್ಳುವದ
ಇವರ ಜೀವನದ ಸಂತತ ಕಾರ್ಯಕ್ರಮ. ಇವರ ಹಳೆಗನ್ನಡ ಕಾವ್ಯ
ನಿಜವಾಗಿ ಅನುಕರಣೀಯವಾಗಿದೆ. ಶಿವಾನಂದ ಲಹರಿಯನ್ನು ಕನ
ಇವರ ಸಂಸ್ಕೃತ ಕಾವ್ಯ ವ್ಯಾಸಂಗ ಎಷ್ಟೆಂಬುದು ತಾನೇ ಸ್ಪಷ್ಟವಾಗುತ್ತಿ

ಷಡಕ್ಷರ ದೇವನ ರಾಜಶೇಖರ ವಿಲಾಸವನ್ನು ಸಂಗ್ರಹರೂಪವಾಗಿ
ುಲು ಹವಣಿಸಿ ಶ್ರೀ. ವೀರಪ್ಪನವರು ೧–೨ ಅಧ್ಯಾಯಗಳನ್ನು ವಾರ್ಧಿಕ
ದಿಯಲ್ಲಿ ಬರೆದಿದ್ದಾರೆ. ಅನೇಕ ಸ್ತೋತ್ರ ಪದ್ಯಗಳನ್ನೂ ಹಾಡುಗಬ್ಬ
ನ್ನೂ ಇವರು ರಚಿಸಿದ್ದಾರೆ. ಬಾಣ ಕವಿಯ ಕಾದಂಬರಿಯನ್ನು ಸುವು
ಜ್ಞವಾದ ಶೈಲಿಯಲ್ಲಿ ಕನ್ನಡಿಸಿ, ಪ್ರಸಿದ್ಧಿಸಿದ, ಕನ್ನಡಿಗರಿಗೆ ಚಿರಪರಿಚಿತ
ಶ್ರೀ. ಗಂಗಾಧರ ಮಡಿವಾಳೇಶ್ವರ ತೂರಮರಿಯವರ ಸಂಕ್ಷಿಪ್ತ ಚರಿತ್ರೆ
ನ್ನು ಇವರು ಬರೆದಿದ್ದಾರೆ. ಇವರ ವಜ್ರಮುಂಗುರ ಮುಂತಾದ ಸಣ್ಣ
ಳು ತರುಣ ಕರ್ನಾಟಕದಲ್ಲಿ ಪ್ರಕಟವಾಗಿವೆ. ಕೆಲವು 'ಸಮಸ್ಯಾ'
ಗಳನ್ನು ಮತ್ತು ಸಮಸ್ಯಾ ಪದ್ಯಗಳಿಗೆ ಉತ್ತರ ರೂಪಕವಾದ ಪದ್ಯ
ನ್ನು ಇವರು ಬರೆದಿದ್ದಾರೆ. ಇಂಥ ಕೆಲ ಪದ್ಯಗಳು 'ಶ್ರೀಕೃಷ್ಣಸೂಕ್ತಿ'
ಕನ್ನಡ ಮಾಸಿಕ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಇವಲ್ಲದೆ ಕಾವ್ಯ
ವನ್ನು ಕೆರಳಿಸಿದ ಅನೇಕ ಸಂದರ್ಭಗಳಲ್ಲಿ ಹಲವಾರು ಬಿಡಿ ಬಿಡಿ
ಗಳನ್ನು ಇವರು ಹಾಡಿದ್ದಾರೆ ಕ್ರಿ. ಶ. ೧೯೨೧ ರಲ್ಲಿ ಇವರ ಗುರು
ಕಂಬಿ ಬಸವಾರ್ಯರು ಲಿಂಗೈಕ್ಯರಾದಾಗ, ತಮ್ಮ ಪ್ರಿಯ ಪತ್ನಿ ಚೆನ್ನಮ್ಮ
ತ್ತ ಗಂಡು ಮಗು ಅಕಾಲ ಮೃತ್ಯುವಿಗೀಡಾದ ದಾರುಣದುಃಖದ ವಿಷಮ
ವೇಶದಲ್ಲಿ, ತಮ್ಮ ಸಂಸಾರ ಸಲೀಲವಾಗಿ ನಡೆದ ಸರಸ ಸಂದರ್ಭಗಳಲ್ಲಿ
ಕಾವ್ಯಹೃದಯುರಸ ಪದ್ಯಗಳ ರೂಪುತಾಳಿ ಹರಿದಿವೆ. ತಮ್ಮ
ಾರಿಯ ಲಗ್ನದ ಆಹ್ವಾನ ಪತ್ರವನ್ನು ಪದ್ಯರೂಪವಾಗಿಯೇ ಬರೆದು
ದ ಇವರು ಕಾವ್ಯದಲ್ಲಿರುವ ಮುಗ್ಧಭಕ್ತಿಯನ್ನು ತಾವೇ ಮನಬಿಚ್ಚಿ
ಗೆ ಸಾರಿದ್ದಾರೆ

ಎಪ್ಪತ್ತೆಂಟು ವರ್ಷದ ವಯಸ್ಸಿನ ಸೀಮೆಯಲ್ಲಿರುವ ಶ್ರೀ. ನಾಗಸೆಟ್ಟಿ
ಪ್ಪನವರ ಜೀವನ ಇನ್ನೂ ಸದಾರೋಗ್ಯವಾಗಿ, ಸದಾನಂದವಾಗಿ ಹರಿ
ತ್ತ ಮುಂದಿನ ಸಂತತಿಯನ್ನು ನಲುಮೆಯಿಂದ ಹರಸಲೆಂದು ಹೃತ್ಪೂರ್ವಕ
ಸುತ್ತೇನೆ. ಮತ್ತು ಅವರ ಕನ್ನಡ ಶಿವಾನಂದ ಲಹರಿಯು ಕನ್ನಡಿಗರ
ಹೃನಯದಲ್ಲಿ ಶಿವಾನಂದ ಲಹರಿ ಎಬ್ಬಿಸಲೆಂದು ಅದೇ ಶಿವಾನಂದ
ಪ್ರಾರ್ಥಿಸುತ್ತೇನೆ.

ಶಿ ಪ ಂ ಭೂ ಯಾ ತ್

**ಸಂ. ಶಿ. ಭೂಸನೂರಮಠ**

# ಅರಿಕೆ

●

ಶ್ರೀಮತ್ಪರಮಹಂಸ ಆದ್ಯ ಶಂಕರಾಚಾರ್ಯರು ಭಾರತೀಯರಿಗೆ
ವಾಗಿ ಕನ್ನಡಿಗರಿಗೆ ಚಿರಪರಿಚಿತರಾಗಿದ್ದಾರೆ. ಅದ್ವೈತ ಮತದವರಿಗೆ ಆದಿ
ವಾಗಿದ್ದಾರೆ ಬೌದ್ಧ ಧರ್ಮದ ದಾಳಿಗೀಡಾದ ಸನಾತನ ವೈದಿಕ ಧರ್ಮವನ
ಪುಣ್ಯ ಪುರುಷರಾಗಿದ್ದಾರೆ. ಪ್ರಸ್ಥಾನತ್ರಯಕ್ಕೆ ಬರೆದ ಅವರ ಭ
ಸಂಸ್ಕೃತ ಪಂಡಿತರ ಮೆಚ್ಚುಗೆಗೆ ಪಾತ್ರವಾಗಿದೆ. ಆಚಾರ್ಯರ ಭಕ್ತಿ ಗಿ
ಭಕ್ತರ ಮನವನ್ನು ತಣಿಸಿವೆ; ಹೃದಯವನ್ನರಳಿಸಿವೆ. ಅವರ ಶಿ
ಲಹರಿಯು ಇಂಥ ಭಕ್ತಿಗೀತೆಗಳಲ್ಲೊಂದು. ಮಹಾ ಮೇಧಾವಿಗಳೆನಿಸಿ
ರ್ಯರ ಹೃದಯದಲ್ಲಿ ಭಕ್ತಿರಸವುಕ್ಕಿ ಶಿವಾನಂದ ಲಹರಿಯಾಗಿ ಹರಿದು
ಭಾಷೆಯನ್ನಲಂಕರಿಸಿದೆ. ಅದನ್ನೋದಿ ತಣಿಯದ ಸಂಸ್ಕೃತ ಪಂ
ಅದನ್ನು ಹಾಡಿ, ಹಾಡಿ ನಲಿದಾಡದ ಭಕ್ತರಿಲ್ಲ. ಹೀಗೆ ಶಿವಾನಂದ ಲಹರಿ
ಹಾಡಿ ಹಾಡಿ ನಲಿದಾಡಿದ ಭಕ್ತರಲ್ಲಿ ನಾನೊಬ್ಬ. ಸಂಸ್ಕೃತವನ್ನರಿಯದ
ಗರಿಗೆ ಅದರ ಸವಿಯು ತಿಳಿಯದಲ್ಲಾ ಎಂಬ ಕೊರಗು ಅದನ್ನು
ಕನ್ನಡಿಸ ಹಚ್ಚಿತು. ಕನ್ನಡ ಶಿವಾನಂದ ಲಹರಿಯನ್ನು ನನ್ನ ಗೆಳೆಯರ
ಹಾಡಿ ತೋರಿಸಿದಾಗ ಅವರು ತಮ್ಮ ಮೆಚ್ಚುಗೆಯನ್ನು ವ್ಯಕ್ತಮಾ
ಹತ್ತು ಹದಿನೈದು ವರ್ಷಗಳ ಹಿಂದೆ ಬರೆದರೂ ಅದು ಇಲ್ಲಿಯವರೆಗೆ ಬೆ
ಕಾಣದೆ ಕುಳಿತಿತ್ತು. ಇದೀಗ ಅದು ಪ್ರಕಟವಾಗುವ ಸುಯೋಗವು ಬ
ಕ್ಕಾಗಿ ನನಗೊಂದು ಬಗೆಯ ಸಮಾಧಾನವಾಗಿದೆ. ಶಿವಭಕ್ತನೊಬ್ಬರ
ಅದನ್ನೋದಿ ತಣಿದರೆ, ನನ್ನ ಶ್ರಮವು ಸಾರ್ಥಕವಾಯಿತೆಂದು ಭಾವಿಸು

ಶ್ರೀ ಶಂಕರಾಚಾರ್ಯರ ಭಾಷಾ ಪ್ರಭುತ್ವವಾಗಲಿ ಹೃದಯ ಪ
ವಾಗಲಿ ನನ್ನಲ್ಲಿಲ್ಲ. ಅವರ ಭಕ್ತಿ ಭಾವದ ಒಂದು ಕಿಡಿಯು ನನ್ನ
ಲ್ಲೊಂದು ದಾರಿ ದೀಪವಾಗಿ ಬೆಳಗಿ ನನ್ನ ಜೀವನವನ್ನು ಪಾವನಗೊ
ಅದರದೊಂದಂಶವು ಕನ್ನಡ ಶಿವಾನಂದ ಲಹರಿಯಲ್ಲಿಳಿದಿದ್ದರೆ ಕನ್ನಡ
ರಿಗೂ ಆ ಪುಣ್ಯವು ಲಭಿಸೀತೆಂದು ನಂಬಿದ್ದೇನೆ.

ಪ್ರೊ ಎಸ್. ಎಸ್. ಭೂಸನೂರಮಠ ಎಮ್. ಎ. ಲಿಂಗರಾಜ ಕಾಲೇಜ
ಾವಿ ಅವರು ಅಂದವಾದೊಂದು ಮುನ್ನುಡಿಯನ್ನು ಬರೆದು ಕೊಟ್ಟು
ಿಗೊಂದು ತಿಲಕವನ್ನಿಟ್ಟಿದ್ದಾರೆ. ಅದರಲ್ಲಿ ನನ್ನ ಮೇಲಿರುವ ತಮ್ಮ
ನಾದ ಪ್ರೇಮಾದರಗಳನ್ನು ವ್ಯಕ್ತಮಾಡಿದ್ದಾರೆ. ಅವರ ಉಪಕಾರವನ್ನು
ನುನ್ನಿಸಿದರೂ ಸಾಲದು. ಈ ಕಾವ್ಯ ರಚನಾ ಕಾರ್ಯದಲ್ಲಿ ಕವಿ ಸಹಜ
ಮೆರುಗನ್ನಿತ್ತು ಪ್ರೋತ್ಸಾಹನೆ ನೀಡಿರುವ ನನ್ನ ಬಂಧುಗಳೂ,ವೇದಾಂತ
ಪರಿಣತರೂ, ಕವಿಗಳೂ ಆಗಿರುವ ಯಕ್ಕುಂಡಿಯ ಶ್ರೀ. ಹೊಂಗಲ
ಾದಪ್ಪನವರಿಗೂ, ನುಡಿದಾಯಿಯ ನನ್ನ ಅಲ್ಪ ಸೇವೆಯನ್ನು ಬೆಳಕಿಗೆ
ಾರಣರಾದ ಕಿತ್ತೂರಿನ ನನ್ನ ಆತ್ಮೀಯ ಶಿಷ್ಯೋತ್ತಮರಾದ ಶ್ರೀ ಬಿ. ಆರ್.
ಬಿ ಎ. ( ಆನರ್ಸ ) ಬಿ. ಟಿ. ಅವರಿಗೂ ನಾನು ಚಿರಋಣಿಯಾಗಿ
ಕೊನೆಯದಾಗಿ, ಅಲ್ಪಾವಕಾಶದೊಳಗಾಗಿ ಈ ಹೊತ್ತಿಗೆಯನ್ನು ಅಂದ
ುದ್ರಿಸಿಕೊಟ್ಟ ಧಾರವಾಡ ಪ್ರೆಸ್ಸಿನ ಒಡೆಯರಿಗೂ ನನ್ನ ಕೃತಜ್ಞತೆಗಳು.

ತ್ತೂರ
—೫೬

ನುಡಿದಾಯಿಯ ನಮ್ರ ಸೇವಕ,
ವೀರಪ್ಪ ವೀರಭದ್ರಪ್ಪ ನಾಗಸೆಟ್ಟಿ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
| --- | --- | --- | --- |
| ೨ | ೧೨ | ಶ್ವರನೇ | ಶ್ವರನೆ |
| ೨ | ೧೪ | ಮಡವಿನೊಳು | ಮಡುವಿನೊಳು |
| ೪ | ೧೩ | ಭಾಥೆ | ಬಾಥೆ |
| ೪ | ೨೦ | ನ್ನರಿವೆ | ನ್ನರಿವಂ |
| ೫ | ೩ | ತೃಷ್ಣಾನು | ತೃಷ್ಣಾಸು |
| ೯ | ೫ | ದೀನಾನರ | ದೀನಾನಧ |
| ೯ | ೮ | ಪ್ರಸನ್ನೆಪಿ | ಪ್ರಸನ್ನೇಪಿ |
| ೧೨ | ೧೩ | ತಡೆಯಾಡು | ತೆಡೆಯಾಡು |
| ೧೫ | ೧೬ | ವುವುದಾ | ಗುವುದಾ |
| ೧೭ | ೯ | ಸ್ವಾಮಿನ್ ಸ್ಥಿರ | ಸ್ವಾಮಿನ್ನಸ್ಥಿರ |
| ೧೭ | ೧೪ | ಪಣ್ಣೋ | ಪಣ್ಣೊ |
| ೧೯ | ೧೬ | ನೊಡಲ | ನ್ನೊಡಲ |
| ೨೦ | ೧೯ | ಅಂಬು | ಯಂಬು |
| ೩೩ | ೧೮ | ಸನಿಹಕ್ಕೆ | ಸನಿಹಕೆ |
| ೩೫ | ೧೪ | ಸುರಚಿರ | ಸುರುಚಿರ |
| ೩೫ | ೧೯ | ಉಳ್ಳೊಡಿವ್ರ | ಉಳ್ಳೊಡಿವು |
| ೩೮ | ೧೭ | ಗೆಯ್ದೆನ್ನ | ಗೆಯ್ದೆನ್ನ ಯು |
| ೪೦ | ೫ | ವಧೂವಿಪ | ವಧೂವಿಫ |
| ೪೦ | ೧೩ | ಚಾರವಿಧಿ ವಿಧಾನವುಂ | ಚಾರವಿಧಾನವುಂ |
| ೪೧ | ೪ | ವೇದ್ಯಾದಿಫು | ವೇದ್ಯಾದಿಪು |
| ೪೧ | ೧೯ | ದೊರೊರ್ವೆ | ದೋರ್ಗೋರ್ವೆ |
| ೪೪ | ೧೭ | ವ್ರಾತಾಮೇ | ವ್ರಾತಮೇ |
| ೪೫ | ೨೦ | ವಿಂದೋ | ವಿಂದೊ |
| ೪೫ | ೨೦ | ಯಿಂದೊ | ಯಿಂದೋ |

॥ ಶ್ರೀಗುರುಭ್ಯೋನಮಃ ॥

# ಶ್ರೀ ಶಿವಾನಂದ ಲಹರಿ



ಶಿಖರಿಣೀ ವೃತ್ತ

ಕಲಾಭ್ಯಾಂ ಚೂಡಾಲಂಕೃತ ಶಶಿಕಲಾಭ್ಯಾಂ ನಿಜತಪಃ
ಫಲಾಭ್ಯಾಂ ಭಕ್ತೇಷು ಪ್ರಕಟಿತಫಲಾಭ್ಯಾಂ ಭವತು ಮೇ ।
ಶಿವಾಭ್ಯಾಮಸ್ತೋಕ ತ್ರಿಭುವನ ಶಿವಾಭ್ಯಾಂ ಹೃದಿ ಮನ
ರ್ಭವಾಭ್ಯಾಮಾನಂದಸ್ಫುರದನುಭವಾಭ್ಯಾಂ ನತಿರಿಯಂ ॥೧॥

ಕಲೆಯ ರೂಪಿಂದೊಪ್ಪುವರ್ಗೆ ತಲೆಯೊಳ್ ಚಂದ್ರ
ಕಲೆಯನಾಂತಿರ್ಪರ್ಗೆ ತಮ್ಮಯ ತಪಸ್ಸುಗಳ
ಫಲವುಂ ತಾವನ್ಯೋನ್ಯವಾದರ್ಗೆ ಭಕ್ತೇಷ್ಟಫಲದರ್ಗೆ ಮೂಲೋಕಕೆ ॥
ಸಲೆ ಶಿವಂಗಳನೀಯುತಿರ್ಪ ಶಿವ ಶಿವೆಯರ್ಗ-
ಮಲ ಮಾನಸದೊಳು ಮಗುಳ್ದುದ್ಭವಿಸುವವರ್ಗೆ ಪ್ರೋ
ಜ್ವಲತರಾನಂದಾನುಭವದಿಂದವೊಪ್ಪುವರ್ಗೀಯೆನ್ನ ನಮ್ರ ನತಿಯು ॥೧॥

ಶಿಖರಿಣೀ ವೃತ್ತ

ಗಳಂತೀ ಶಂಭೋ ತ್ವಚ್ಚರಿತಸರಿತಃ ಕಿಲ್ಬಿಷರಜೋ ।
ದಳಂತೀ ಧೀಕುಲ್ಯಾಸರಣಿಷು ಪತಂತೀ ವಿಜಯತಾಂ ॥
ದಿಶಂತೀ ಸಂಸಾರಭ್ರಮಣ ಪರಿತಾಪೋಪಶಮನಂ ।
ವಸಂತೀ ಮಚ್ಚೇತೋ ಹ್ರದಭುವಿ ಶಿವಾನಂದಲಹರೀ ॥ ೨ ॥

ಶಿಖರಿಣೀ ವೃತ್ತ

ತ್ರಯೀ ವೇದ್ಯಂ ಹೃದ್ಯಂ ತ್ರಿಪುರಹರಮಾದ್ಯಂ ತ್ರಿನಯನಂ
ಜಟಾಭಾರೋದಾರಂ ಚಲದುರಗಹಾರಂ ಮೃಗಧರಂ ॥
ಮಹಾದೇವಂ ದೇವಂ ಮಯಿ ಸದಯಭಾವಂ ಪಶುಪತಿಂ ।
ಚಿದಾಲಂಬಂ ಸಾಂಬಂ ಶಿವಮತಿವಿಡಂಬಂ ಹೃದಿ ಭಜೇ ॥ ೩ ॥

ವಾರ್ಧಿಕ ಷಟ್ಪದಿ

ಪರಮೇಶ್ವರನೇ ! ನಿನ್ನ ಸಚ್ಚರಿತನದಿಯಿಂದೆ
ಪೊರಳುತಂ ಮತಿಯೆಂಬ ಕಾಲುವೆಯ ಮಾರ್ಗದಿಂ
ಪರಿಯುತಂ ಸಾವಧಾನದಿನೆನ್ನ ಮನಮೆಂಬ ಮಡವಿನೊಳು ಬಂದು ನಿ[illegible]
ದುರಿತಮಾಲಿನ್ಯಮಂ ಕಳೆವುತಂ ಭವದೊಳಾಂ
ತಿರುತಿರುಗಿ ಪಟ್ಟ ಪರಿತಾಪಮಂ ಬಿಡದೆ ಪರಿ
ಹರಿಸುತಂ ಮೆರೆವೀ ಶಿವಾನಂದಲಹರಿ ತಾಂ ಗೆಲವಿಂ ಚಿರಂ ಬಾಳಲಿ ॥[illegible]

ವಾರ್ಧಿಕ ಷಟ್ಪದಿ

ನಿಗಮತ್ರಯಕೆ ವೇದ್ಯನಂ ಹೃದ್ಯನಂ ನಿಖಿಳ
ಜಗದಾದ್ಯನಂ ತ್ರಿಪುರಹರನಂ ತ್ರಿನೇತ್ರನಂ
ಮೃಗಧರನನುರಗೇಂದ್ರ ಹಾರನಂ ಚಂಚಜ್ಜಟಾಭಾರ ಗಂಭೀರನಂ ॥
ಜಗದಾತ್ಮನಂ ಮಹಾದೇವನಂ ದೇವನಂ
ಮಿಗೆ ಸದಯ ಭಾವನಂ ಶಿವನಂ ಪಶುಪತಿಯುಂ
ಬಗೆಯೊಳ್ ಸದಾ ಭಜಿಸುವೆಂ ಚಿದಾಳಂಬನನತಿವಿಡಂಬನಂ ಸಾಂಬನ[illegible] ॥ ೩ ॥

ಶಿಖರಿಣೀ ವೃತ್ತ

ಸಹಸ್ರಂ ವರ್ತಂತೇ ಜಗತಿ ವಿಬುಧಾಃ ಕ್ಷುದ್ರ ಫಲದಾಃ |
ನ ಮನ್ಯೇ ಸ್ವಪ್ನೇವಾ ತದನುಸರಣಂ ತತ್ಕೃತ ಫಲಂ ||
ಹರಿಬ್ರಹ್ಮಾದೀನಾಮಪಿ ನಿಕಟಭಾಜಾಮಸುಲಭಂ |
ಚಿರಂ ಯಾಚೇ ಶಂಭೋ ಶಿವ ತವ ಪದಾಂಭೋಜ ಭಜನಂ || ೪ ||

ಶಿಖರಿಣೀ ವೃತ್ತ

ಸ್ಮೃತೌ ಶಾಸ್ತ್ರೇ ವೈದ್ಯೇ ಶಕುನಕವಿತಾಗಾನ ಫಣಿತೌ |
ಪುರಾಣೇ ಮಂತ್ರೇ ವಾ ಸ್ತುತಿನಟನಹಾಸ್ಯೇಷ್ವಚತುರಃ ||
ಕಥಂ ರಾಜ್ಞಾಂ ಪ್ರೀತಿರ್ಭವತಿ ಮಯಿ ಕೋಽಹಂ ಪಶುಪತೇ
ಪಶುಂ ಮಾಂ ಸರ್ವಜ್ಞ ಪ್ರಥಿತ ಕೃಪಯಾ ಪಾಲಯ ವಿಭೋ ||೫||

ವಾರ್ಧಿಕ ಷಟ್ಪದಿ

ಬಗೆ ಬಗೆಯ ಕ್ಷುದ್ರ ಫಲಗಳನೀವ ದೇವರೀ
ಜಗದೊಳ್ ಸಾಸಿರ್ವರಿರ್ಪರ್ ಕನಸಿನಲ್ಲಿಯುಂ
ಬಗೆಯೆಂ ನಾನವರಾಶ್ರಯವನವರ್ ನಲಿದೊಲಿದು ಕೊಡುವ ಫಲಭೋಗಂಗಳಂ
ನಗತನೂಜಾಧವನೆ ನಿನ್ನ ಸನ್ನಿಧಿಯೊಳಾ
ಪಗಮಿರ್ಪ ಹರಿ ವಿಧಿ ಮುಖರ್ಗೆ ದುರ್ಲಭವಾದ
ಸೊಗಯಿಸುವ ನಿನ್ನ ಪಾದಾಂಬುಜಂಗಳ ಭಜನೆಯನೆ ಸಂತತಂ ಬೇಳ್ಪೆನು || ೪ ||

ಮತ್ತೇಭ ವಿಕ್ರೀಡಿತ ವೃತ್ತ

ಸ್ಮೃತಿಯೊಳ್ ಶಾಸ್ತ್ರ-ಪುರಾಣ-ಹಾಸ್ಯ-ಕವಿತಾ-ಸಂಗೀತ-ನಾಟ್ಯಂಗಳೊಳ್|
ಸ್ತುತಿಯೊಳ್ ಜ್ಯೋತಿಷ-ವೈದ್ಯ-ಮಂತ್ರಗಳೊಳಾನಜ್ಞಾನಿ ಯೆಂತೊಲ್ದಪರ್||
ಕ್ಷಿತಿನಾಥರ್ ! ಪಶುವಾಂ ಕಣಾ ! ಪಶುಪತೀ ! ಸರ್ವಜ್ಞ ! ನೀನೊಲ್ದು ಸಂ-
ತತಮುಂ ಸೌಖ್ಯಮನಿತ್ತು ಮತ್ರಭುವೆ ! ಸತ್ಕಾರುಣ್ಯದಿಂ ರಕ್ಷಿಸೈ ! ||೫||

ಶಿಖರಿಣೀ ವೃತ್ತ

ಘಟೋ ವಾ ಮೃತ್ಪಿಂಡೋಪ್ಯಣುರಪಿ ಚ ಧೂಮೋಗ್ನಿರಚಲಃ |
ಪಟೋ ವಾ ತಂತುರ್ವಾ ಪರಿಹರತಿ ಕಿಂ ಘೋರಶಮನಂ ||
ವೃಥಾ ಕಂಠಕ್ಷೋಭಂ ವಹಸಿ ತರಸಾ ತರ್ಕ ವಚಸಾ
ಪದಾಂಭೋಜಂ ಶಂಭೋರ್ಭಜ ಪರಮಸೌಖ್ಯಂ ವ್ರಜ ಸುಧೀಃ ||೬||

ಶಿಖರಿಣೀ ವೃತ್ತ

ಮನಸ್ತೇ ಪಾದಾಬ್ಜೇ ನಿವಸತು ವಚಸ್ತೋತ್ರ ಫಣಿತೌ |
ಕರಶ್ಚಾಭ್ಯರ್ಚಾಯಾಂ ಶ್ರುತಿರಪಿ ಕಥಾ ಕರ್ಣನ ವಿಧೌ ||
ತವಧ್ಯಾನೇ ಬುದ್ಧಿರ್ನಯನಯುಗಳಂ ಮೂರ್ತಿವಿಭವೇ |
ಪರಗ್ರಂಥಾನ್ ಕೈರ್ವಾ ಪರಮ ಶಿವ ಜಾನೇ ಪರಮತಃ || ೭ ||

ಮತ್ತೇಭ ವಿಕ್ರೀಡಿತ

ಘಟಮುಂ ಮೃತ್ತಿಕೆ ಧೂಮವಗ್ನಿಯಚಲಂ ಸೂಕ್ಷ್ಮಾಣುವುಂ ತಂ
ಪಟಮುಂ ಕಾಲನ ಬಾಧೆಯಂ ಕಳೆದು ನಿನ್ನಂ ಕಾಯ್ವುವೇಂ? ತರ್ಕ
ಕ್ಪಟು ವಿದ್ವಾಂಸ! ನಿರರ್ಥಕಂ ತಳೆವೆ ! ಕಂಠಕ್ಷೋಭಮಂ ಶೀಘ್ರದಿಂ
ನಿಟಿಲಾಕ್ಷಾಂಘ್ರಿ ಸರೋಜಮಂ ಭಜಿಸಿ ನಿತ್ಯಾನಂದಮಂ ಪೊಂದೆಲೈ !

ಮತ್ತೇಭ ವಿಕ್ರೀಡಿತ ವೃತ್ತ

ಶಿವ ! ನಿನ್ನರ್ಚನೆಯಲ್ಲಿ ಎನ್ನಯ ಕರಂಗಳ್ ಧ್ಯಾನದೊಳ್ ಬುದ್
ಸ್ತವದೊಳ್ ವಾಣಿ ಲಸತ್ಕಥಾಶ್ರವಣದೊಳ್ ಕರ್ಣಂಗಳಾ · ಮೂ
ಭವದೊಳ್ ನೇತ್ರಯುಗಂ ಪದಾಬ್ಜದೆ ಮನಂ ಸಂದಿರ್ಕೆ ! ಇಂತಾದೆ
ವವರಿಂದಿನ್ನರಿವೆ ವಿವೇಚಿಸಿ ಪರ ಗ್ರಂಥಂಗಳಂ ಶಂಭುವೇ ! || ೭ ||

ಶಿಖರಿಣೀ ವೃತ್ತ

ಯಥಾ ಬುದ್ಧಿಶ್ಶುಕ್ತೌ ರಜತ ಮಿತಿ ಕಾಚಾಶ್ಮನಿ ಮಣಿ
[illegible]ಲೇ ನೈಷ್ಟೇಕ್ಷೀಳಂ ಭವತಿ ಮೃಗತೃಷ್ಣಾನು ಸಲಿಲಂ ||
[illegible]ಥಾ ದೇವ ಭ್ರಾಂತ್ಯಾ ಭಜತಿ ಭವದನ್ಯಂ ಜಡ ಜನೋ |
[illegible]ಹಾದೇವೇಶ ತ್ವಾಂ ಮನಸಿಜ ನಮತ್ವಾ ಪಶುಪತೇ || ೮ ||

ಶಿಖರಿಣೀ ವೃತ್ತ

ಗಭೀರೇ ಕಾಸಾರೇ ವಿಶತಿ ವಿಜನೇ ಘೋರವಿಪಿನೇ |
ವಿಶಾಲೇ ಶೈಲೇಚ ಭ್ರಮತಿ ಕುಸುಮಾರ್ಥಂ ಜಡಮತಿಃ ||
[illegible]ಮಪ್ಯೈಕಂ ಚೇತಸ್ಸರಸಿಜಮುಮಾನಾಥ ಭವತೇ
[illegible]ಖೇನಾವಸ್ಥಾತುಂ ಜನ ಇಹ ನಜಾನಾತಿ ಕಿಮಹೋ ||೯||

ಮತ್ತೇಭ ವಿಕ್ರೀಡಿತ ವೃತ್ತ

ಭಜಿಸುತ್ತಿರ್ದಪುದನ್ಯರನ್ನೆ ಭ್ರಮೆಯಿಂದಂ ದೇವರೆಂದೋಹೊ ! ಮೂ–
ಜನಂ ! ಶಂಕರ ದೇವ ದೇವ ನೆನಿಸಿರ್ದಾ ನಿನ್ನನೇ ಕಾಣದೇ ||
ಸದಿಂ ಪಿಟ್ಟನನೀರ್ಗೆ ಪಾಲೆನುತೆ ಕಾಜಂ ರತ್ನಮಾ ಶುಕ್ತಿಯಂ |
ಸತಂ ತಾನೆನುತಂ ಬಿಸಿಲ್ಗುದುರೆಯಂ ನೀರೆನ್ನುತಂ ಭಾವಿಪೋಲ್ || ೮ ||

ಚಂಪಕಮಾಲಾ ವೃತ್ತ

. ಪೊಗುವರಗಾಧಮಾದ ಕೊಳಮಂ ಜನಮಿಲ್ಲದರಣ್ಯದೋಳ್ ಮಹಾ |
ಸ್ತುತಿಗಗಪೊಳು ಪೂವಿಗಾಗಿ ತೊಳಲ್ವರ್ ಮರುಳರ್ ! ಶಿವ, ನಿನ್ನನರ್ಚಿಸಲ್ ||
ಕ್ಷಿತಿಗಸಗಿಲಹ ಮಾನಸಾಂಬುಜಮನೊಂದನೆ ನಿನ್ನಡಿಗರ್ಪಿಸುತ್ತೆ ತಾಂ |
ತತಮೂಗದಿನಿರಲ್ಕದೇಕರಿಯದೋ ಜನವಿಾ ಜಗದೊಳ್ ಶಿವಾಧವಾ ! ||೯||

ಶಿಖರಿಣೀ ವೃತ್ತ

ನರತ್ವಂ ದೇವತ್ವಂ ನಗವನಮೃಗತ್ವಂ ಮಶಕತಾ |
ಪಶುತ್ವಂ ಕೀಟತ್ವಂ ಭವತು ವಿಹಗತ್ವಾದಿ ಜನನಮ್ ||
ಸದಾ ತ್ವತ್ಪಾದಾಬ್ಜಸ್ಮರಣ ಪರಮಾನಂದಲಹರೀ |
ವಿಹಾರಾಸಕ್ತಂ ಚೇದ್ಧೃದಯಮಿಹ ಕಿಂ ತೇನ ವಪುಷಾ ||೧೦||

ಶಿಖರಿಣೀ ವೃತ್ತ

ವಟುರ್ವಾ ಗೇಹೀವಾ ಯತಿರಪಿ ಜಟೀ ವಾತದಿತರೋ
ನರೋವಾ ಯಃ ಕಶ್ಚಿದ್ಭವತು ಭವ ಕಿಂತೇನ ಭವತಿ ||
ಯದೀಯಂ ಹೃತ್ಪದ್ಮಂ ಯದಿ ಭವದಧೀನಂ ಪಶುಪತೇ |
ತದೀಯಸ್ತ್ವಂ ಶಂಭೋ ಭವಸಿ ಭವ ಭಾರಂಚ ವಹಸಿ || ೧೧ ||

ಮಹಾಸ್ರಗ್ಧರಾ ವೃತ್ತ

ಮನುಜತ್ವಂ ನಿರ್ಜರತ್ವಂ ನಗ ವಿಪಿನ ಮೃಗತ್ವಂ ಪಶುತ್ವಂ ಖಗತ್ವಂ
ತನುಕೀಟತ್ವಂ ಕ್ರಿಮಿತ್ವಂ ನೊಣತನ ಮೊದಲಾದಾವುದೇ ಜನ್ಮದಲ್ಲಿ ||
ಜನನಂ ತಾನಕ್ಕೆ! ನಿತ್ಯಂ ನೆನೆಯುತೆ ಶಿವಪಾದಾಬ್ಜಮಂ ಭಕ್ತಿಯಿಂದಂ |
ಮನಮೆಂದುಂ ಶ್ರೀಶಿವಾನಂದಲಹರಿಯೊಳಿರಲ್ ಸಾಲ್ಗುಮಾದೇಹದಿಂದೇಂ ||

ವಾರ್ಧಿಕ ಷಟ್ಪದಿ

ನಿರುಕಿಸಲ್ ವಟುವಾಗಿರಲಿ ತಾಂ ಗೃಹಸ್ಥನಾ-
ಗಿರಲಿ ಯತಿಯಾಗಿರಲಿ ವನವಾಸಿಯಾಗಿರಲಿ,
ನರನಿರಲಿ ಜೇರಾವನಾದೊಡಾಗಿರಲಿಯದರಿಂದೆ ಬಹ ಫಲವದೇನು ?
ನಿರುತವಾವನ ಮನಂ ನಿನ್ನಧೀನದೊಳಿಹುದೊ !
ಪುರ ಹರನೆ ! ಶಂಭು ! ನೀನಾತನವನಪ್ಪೆ ! ಮೇಣ್
ಪೊರುವೆಯನುರಾಗದಿಂ ನೀನವನ ಸಂಸಾರಭಾರವೆಲ್ಲವನಲಸದೆ || ೧

ಶಿಖರಿಣೀ ವೃತ್ತ

ಗುಹಾಯಾಂ ಗೇಹೇ ವಾ ಬಹಿರಪಿ ವನೇ ವಾದ್ರಿ ಶಿಖರೇ
ಲೇ ವಾ ವಹ್ನೌವಾ ವಸತು ವಸತೇಃ ಕಿಂ ವದ ಫಲಂ ||
ದಾ ಯಸ್ಯೈವಾಂತಃಕರಣಮುಪಿ ಶಂಭೋ ತವ ಪದೇ |
ತಂ ಚೇದ್ಯೋಗೋ ಸೌ ಸಚ ಪರಮಯೋಗೀ ಸ ಚ ಸುಖೀ || ೧೨ ||

ಶಿಖರಿಣೀ ವೃತ್ತ

ಅಸಾರೇ ಸಂಸಾರೇ ನಿಜಭಜನದೂರೇ ಜಡಧಿಯಾ |
ಮಂತಂ ಮಾಮಂಧಂ ಪರಮ ಕೃಪಯಾ ಪಾತುಮುಚಿತಮ್ ||
ದನ್ಯಃ ಕೋ ದೀನಸ್ತವ ಕೃಪಣ ರಕ್ಷಾತಿ ನಿಪುಣಃ |
ದನ್ಯಃ ಕೋ ವಾ ಮೇ ತ್ರಿಜಗತಿ ಶರಣ್ಯಃ ಪಶುಪತೇ || ೧೩ ||

ವಾರ್ಧಿಕ ಷಟ್ಪದಿ

ಮನೆಯೊಳೇ ಇರಲಿ ಪೊರಗಿರಲಿ ಗವಿಯಲ್ಲಿರಲಿ
ನದಲ್ಲಿರಲಿ ಗಿರಿಯ ಶಿಖರದಲ್ಲಿರಲಿ ಮೇ –
ನಲನೊಳಗಿರಲಿ ಜಲದೊಳಗಿರಲಿ ಬಗೆವೊಡಾಯಿರ್ಕೆಯಿಂದೇನು ಸುಖವು ||
ವರತವಾವನ ಮನಂ ಶಿವನೆ ! ನಿನ್ನಡಿಯೊ –
ರಾಗದಿಂದೆ ನೆಲೆಗೊಂಡಿಹುದೊ ದಿಟದಿನಾ –
ನೆ ನಿತ್ಯ ಸುಖಿ! ಆತನೇ ಯೋಗಿವರನದೇ ಯೋಗವೆಂದೆನಿಸುತಿಹುದು ||೧೨||

ಮತ್ತೇಭ ವಿಕ್ರೀಡಿತ

ಹರನೇ ! ಮೌಢ್ಯದೆ ನಿನ್ನನೋಲಯಿಸದೀ ನಿಸ್ಸಾರ ಸಂಸಾರದೊಳ್ |
ರುಗುತ್ತಿರ್ದನನೆನ್ನನೋವುದುಚಿತಂ ! ಕಾರುಣ್ಯದಿಂದಂಧನಂ ||
ರನೆನ್ನಿಂ ನಿನಗಾವನಿರ್ಪನತಿ ದೀನಂ ? ದೀನ ಸಂರಕ್ಷಣಾ – |
ರ! ನಿನ್ನಿಂದೆನಗಾರ್ ಶರಣ್ಯರಿಹರನ್ಯರ್ ಸಾಂಬ ಮೂಲೋಕದೊಳ್ || ೧೩ ||

ಶಿಖರಿಣೀ ವೃತ್ತ

ಪ್ರಭುಸ್ತ್ವಂ ದೀನಾನಾಂ ಖಲು ಪರಮಬಂಧುಃ ಪಶುಪತೇ |
ಪ್ರಮುಖ್ಯೋಽಹಂ ತೇಷಾಮಪಿ ಕಿಮುತ ಬಂಧುತ್ವಮನಯೋಃ ||
ತ್ವಯೈವ ಕ್ಷಂತವ್ಯಾಶ್ಶಿವ ಮದಪರಾಧಾಶ್ಚ ಸಕಲಾಃ |
ಪ್ರಯತ್ನಾತ್ಕರ್ತವ್ಯಂ ಮದವನ ಮಿಯಂ ಬಂಧುಸರಣಿಃ || ೧೪ ||

ಶಿಖರಿಣೀ ವೃತ್ತ

ಉಪೇಕ್ಷಾ ನೋಚೇತ್ಕಿಂ ನ ಹರಸಿ ಭವದ್ಧ್ಯಾನ ವಿಮುಖಾಂ
ದುರಾಶಾ ಭೂಯಿಷ್ಠಾಂ ವಿಧಿಲಿಪಿಮಶಕ್ತೋ ಯದಿ ಭವಾನ್ ||
ಶಿರಸ್ತದ್ವೈಧಾತ್ರಂ ನನ ಖಲು ಸುವೃತ್ತಂ ಪಶುಪತೇ |
ಕಥಂ ವಾ ನಿರ್ಯತ್ನಾತ್ ಕರನಖ ಮುಖೇನೈವ ಲುಲಿತಂ ||೧೫||

ಉತ್ಪಲಮಾಲಾ ವೃತ್ತ

ದೀನ ಜನರ್ಗೆ ನೀಂ ಪರಮ ಬಂಧುವೆನಿಪ್ಪೆ! ದಯಾಳು ಶಂಕರಾ
ದೀನರೊಳಾನೆ. ಮುಖ್ಯನದರಿಂದೆಮಗೀರ್ವರಿಗಾಯ್ತು ನಂಟು! ಕೇಳ್ ||
ಆನೆಸಗಿರ್ದ ತಪ್ಪುಗಳನೆಲ್ಲಮುಮಂ ಕೃಪೆಯಿಂದೆ ಮನ್ನಿಸಿ |
ನೀನೊಸೆದಕ್ಕರಿಂದೆ ಪರಿಪಾಲಿಪುದೈ! ಇದೆ ಬಂಧುವರ್ತನಂ! || ೧೪ ||

ಉತ್ಪಲಮಾಲಾ ವೃತ್ತ

ಎನ್ನನುಪೇಕ್ಷೆಗೆಯ್ಯದೊಡೆ, ದುರ್ವಿಷಯಾಶೆಯ ವೃದ್ಧಿಗೆಯ್ಯುತ
ನಿನ್ನಯ ಧ್ಯಾನಮಂ ಬಿಡಿಸಿದೀ ವಿಧಿಲೇಖನಮಂ ನಿವಾರಿಸೈ! ||
ನಿನ್ನಳವಲ್ಲವೆಂದೊಡೆ ಕರಂ ದೃಢವಾಗಿಹ ಬ್ರಹ್ಮಶೀರ್ಷಮಂ
ಪನ್ನಗಭೂಷ ಛೇದಿಸಿದೆ ಸಾಜಮುಗುರ್ಕೊನೆಯಿಂದದೆಂತು? ಪೇಳ್ ||

ಶಿಖರಿಣೀ ವೃತ್ತ

ವಿರಿಂಚಿರ್ದೀರ್ಘಾಯುರ್ಭವತು ಭವತಾ ತತ್ಪರಶಿರ |
ತುಷ್ಕಂ ಸಂರಕ್ಷ್ಯಂ ನ ಖಲು ಭುವಿ ದೈನ್ಯಂ ಲಿಖಿತವಾನ್ ||
ಚಾರಃ ಕೋವಾ ಮಾಂ ವಿಶದಕೃಪಯಾ ಪಾತಿ ಶಿವ ತೇ |
ಟಾಕ್ಷ ವ್ಯಾಪಾರಸ್ಸ್ವಯಮಪಿ ಚ ದೀನಾನರ ಪರಃ ||೧೬||

ಶಿಖರಿಣೀ ವೃತ್ತ

ಫಲಾದ್ವಾ ಪುಣ್ಯಾನಾಂ ಮಯಿ ಕರುಣಯಾ ವಾ ತ್ವಯಿವಿಭೋ |
ಸನ್ನೇಽಪಿ ಸ್ವಾಮಿನ್ ಭವದಮಲ ಪಾದಾಬ್ಜಯುಗಳಮ್ ||
ಥಂ ಪಶ್ಯೇಯಂ ಮಾಂ ಸ್ಥಗಮತಿ ನಮಸ್ಸಂಭ್ರಮಜುಷಾಂ |
ಲಿಂಪಾನಾಂ ಶ್ರೇಣಿರ್ನಿಜಕನಕ ಮಾಣಿಕ್ಯಮಕುಟೈಃ || ೧೭ ||

ಮತ್ತೇಭ ವಿಕ್ರೀಡಿತ ವೃತ್ತ

ಬಿದಿ ದೀರ್ಘಾಯುಷಿಯಕ್ಕೆ ! ನೀನವನ ಮಿಕ್ಕಾಸ್ಯಂಗಳಂ ರಕ್ಷಿಸೈ |
ದನಧ್ವಂಸಿಯೆ ! ದೈನ್ಯಮಂ ಬರೆವನಾತಂ ಭೂಮಿಯೊಳ್ ನಿಶ್ಚಯಂ! ||
ಧನಾಲೋಚಿಪುದೇಕೆ ? ಎನ್ನನೊಲವಿಂದಂ ದೀನರಂ ಕಾವ ಕಾ-
ದೊಳೇ ತತ್ಪರವಾದ ನಿನ್ನ ಕಡೆಗಣ್ನೋಟಂ ಸದಾ ರಕ್ಷಿಕುಂ ! ||೧೬||

ಉತ್ಪಲಮಾಲಾ ವೃತ್ತ

ಎನ್ನಯ ಪುಣ್ಯದಿಂದೊ ತ್ವದನುಗ್ರಹದಿಂದೊ ಪ್ರಸನ್ನನಾದೊಡಂ !
ನ್ನಯ ಪಾದಪದ್ಮಯುಗಮಂ ನಲಿದೆಂತು ನಿರೀಕ್ಷಿಪೆಂ ! ಭವತ್ ||
ನ್ನಮನಕ್ಕೆ ಸಂಭ್ರಮದೆ ಬರ್ಪಮರರ್ಕಳ ಪಂಗ್ತಿಯೆನ್ನನೆಂ–
ಂ ನಿಜ ಹೇಮರತ್ನಮಕುಟಂಗಳಿನಡ್ಡವಿಕುಂ ! ಮಹೇಶ್ವರಾ || ೧೭ ||

ಶಿಖರಿಣೀ ವೃತ್ತ

ತ್ವಮೇಕೋ ಲೋಕಾನಾಂ ಪರಮಫಲದೋ ದಿವ್ಯಪದವೀಂ |
ವಹಂತಸ್ತ್ವನ್ಮೂಲಾಂ ಪುನರಪಿ ಭಜಂತೇ ಹರಿಮುಖಾಃ ||
ಕಿಯದ್ವಾ ದಾಕ್ಷಿಣ್ಯಂ ತವ ಶಿವ ಮದಾಶಾ ಚ ಕಿಯತೀ |
ಕದಾ ವಾ ಮದ್ರಕ್ಷಾಂ ವಹಸಿ ಕರುಣಾ ಪೂರಿತದೃಶಾ || ೧೮ ||

ಶಿಖರಿಣೀ ವೃತ್ತ

ದುರಾಶಾ ಭೂಯಿಷ್ಠೇ ದುರಧಿಪಗೃಹದ್ವಾರ ಘಟಕೇ |
ದುರಂತೇ ಸಂಸಾರೇ ದುರಿತನಿಲಯೇ ದುಃಖಜನಕೇ ||
ಮದಾಯಾಸಂ ಕಿಂ ನ ವ್ಯಪನಯಸಿ ಕಸ್ಯೋಪಕೃತಯೇ |
ವದೇಯಂ ಪ್ರೀತಿಶ್ಚೇತ್ತವ ಶಿವ ಕೃತಾರ್ಥಾಃ ಖಲು ವಯಮ್ ||೧೯||

ವಾರ್ಧಿಕ ಷಟ್ಪದಿ

ನೀನೊರ್ವನೇ ಜಗಕೆ ನಿಜ ಸುಖಂಗೊಡುವವನು –
ಮಾನಾಥ! ಪೂರ್ವದೊಳು ನಿನ್ನಿಂದೆ ಪ್ರೋನ್ನತ
ಸ್ಥಾನಂಗಳಂ ಹರಿ ಮುಖಾಮರರ್ ಪಡೆದಿರ್ದು, ಮತ್ತಂ ಭಜಿಸುತಿರ್ಪರ
ತಾನವರೊಳೆನಿತೊ ಬಗೆವೊಡೆ ನಿನ್ನ ದಾಕ್ಷಿಣ್ಯ
ವೇನೆಂಬೆನೆನ್ನಲ್ಪ ನಾಶೆಯದೆನಿತೊ? ಶಿವನೆ!
ನೀನೆನ್ನ ರಕ್ಷಣೆಯನೆಂದು ವಹಿಸುವೆಯೋ? ಕೃಪಾಪೂರ್ಣದೃಷ್ಟಿಯಿಂದ ||

ವಾರ್ಧಿಕ ಷಟ್ಪದಿ

ಪಿರಿದುಂ ದುರಾಶೆಯಿಂ ತೀವಿರ್ದ ಮೇಣ್‌ದುರ್ನೃ-
ಪರ ಮನೆಯ ಬಾಗಿಲೊಳ್ ನಿಲಿಸುವ, ದುರಂತವಹ
ದುರಿತಕಾಗರವಾದ ದುಃಖ.ಸಂಕುಲವನೀಯುತಿಹ ಸಂಸಾರದಲ್ಲಿ ||
ನಿರುತಮೆನಗೊದಗುತಿಹ ಕಷ್ಟಮಂ ದೇವ! ಪರಿ-
ಹರಿಸೆಯೇಕಾವಿಧಿಯ ಮೇಲಿರ್ಪ ದಯಮೊ? ನೀ-
ನೊರೆ ಇದೇ ನಿನಗೊಲ್ಮೆಯೆನಿಸಿದೊಡೆ ಬಿನ್ನವಿಪುದೇಂ ನಾವ್‌ಕೃತಾರ್ಥರಲ್ತೆ||

ಶಿಖರಿಣೀ ವೃತ್ತ

ಸದಾ ಮೋಹಾಟವ್ಯಾ ಚರತಿ ಯುವತೀನಾಂ ಕುಚಗಿರೌ |
ತ್ಯಾಶಾಶಾಖಾಸ್ವಟತಿ ಝುಡಿತಿ ಸ್ವೈರಮಭಿತಃ ||
ಾಲಿನ್ ಭಿಕ್ಷೋ ಮೇ ಹೃದಯ ಕಪಿಮತ್ಯಂತಚಪಲಂ |
ಂ ಭಕ್ತ್ಯಾ ಬಧ್ವಾ ಶಿವ ಭವದಧೀನಂ ಕುರು ವಿಭೋ ||೨೦||

ಶಿಖರಿಣೀ ವೃತ್ತ

ಧೃತಿಸ್ತಂಭಾಧಾರಾಂ ಧೃಢಗುಣನಿಬದ್ಧಾಂ ಸಗಮನಾಂ |
ಚಿತ್ರಾಂ ಪದ್ಮಾಢ್ಯಾಂ ಪ್ರತಿದಿವಸ ಸನ್ಮಾರ್ಗಘಟಿತಾಂ ||
ಾರೇ ಮಚ್ಚೇತ ಸ್ಸ್ಫುಟಪಟಕುಟೀಂ ಪ್ರಾಪ್ಯವಿಶದಾಂ |
ಸು ಸ್ವಾಮಿನ್ ಶಕ್ತ್ಯಾಸಹ ಶಿವಗಣೈಸ್ಸೇವಿತ ವಿಭೋ || ೨೧ ||

ವಾರ್ಧಿಕ ಷಟ್ಪದಿ

ಚರಿಸುತಿಹುದನವರತ ಮೋಹವೆಂಬಡವಿಯೊಳ್ |
ುಣಿಯರ ತುಂಗಕುಚಗಿರಿಗಳೊಳು ಕುಣಿದಪುದು;
ಸಿಂದೆ ನೆಗೆದಾಡುವದು ಸುತ್ತಲುಂ ಸ್ವೇಚ್ಛೆಯಿಂದಾಶೆಗೊಂಬುಗಳೊಳು ||
ಕನೆ! ಕಪಾಲಿಯೇ! ನೋಡೆನ್ನ ಮನವೆಂಬ
ಳಕಪಿಯತ್ಯಂತ ಚಪಲವಾಗಿಹುದಿದಂ
ಭಕ್ತಿಪಾಶದಿಂ ಬಿಗಿದು ಬಂಧಿಸಿ ವಿಭುವೆ ನಿನ್ನಧೀನಂಗೊಳ್ಳಿಲ್ಲೈ ||೨೦||

ಉತ್ಪಲಮಾಲಾ ವೃತ್ತ

ಧೀರತೆಗಂಬದಿಂ ಧೃಢಗುಣವ್ರಜದಿಂ ವಿಲಸದ್ವಿಚಿತ್ರದಿಂ
ರು ಮನೋಜ್ಞ ಪದ್ಮಗಳಿನೊಪ್ಪಿ ಸುಮಾರ್ಗದೆ ಸಂಚರಿಪ್ಪ ವಿ-
ರತೆವೆತ್ತ ಸ್ವಚ್ಛವಿರುವೆನ್ನಯ ಮಾನಸವೆಂಬ ಡೇರೆಯಂ
ೕತಮೊಂದಿ ಜಯಿಸೈ ! ಗಣಸೇವಿತನೇ ಸ್ಮರಾರಿಯೇ || ೨೧ ||

ಶಿಖರಿಣೀ ವೃತ್ತ

ಪ್ರಲೋಭಾದ್ಯೈರರ್ಥಾಹರಣ ಪರತಂತ್ರೋ ಧನಿ ಗೃಹೇ।
ಪ್ರವೇಶೋದ್ಯುಕ್ತಸ್ಸನ್ ಭ್ರಮತಿ ಬಹುಧಾ ತಸ್ಕರಪತೇ॥
ಇಮಂ ಚೇತಶ್ಚೋರಂ ಕಥಮಿಹ ಸಹೇ ಶಂಕರ ವಿಭೋ।
ತವಾಧೀನಂ ಕೃತ್ವಾಮಯಿ ನಿರಪರಾಧೇ ಕುರು ಕೃಪಾಮ್ ॥ ೨೨ ॥

ಶಿಖರಿಣೀ ವೃತ್ತ

ಕರೋಮಿ ತ್ವತ್ಪೂಜಾಂ ಸಪದಿ ಸುಖದೋ ಮೇ ಭವ ವಿಭೋ
ವಿಧಿತ್ವಂ ವಿಷ್ಣುತ್ವಂ ದಿಶಸಿ ಖಲು ತಸ್ಯಾಃ ಫಲಮಿತಿ ॥
ಪುನಶ್ಚ ತ್ವಾಂ ದ್ರಷ್ಟುಂ ದಿವಿ ಭುವಿ ವಹನ್ ಪಕ್ಷಿ ಮೃಗತಾ।
ಮದೃಷ್ಟ್ವಾ ತತ್ಖೇದಂ ಕಥಮಿಹ ಸಹೇ ಶಂಕರ ವಿಭೋ ॥೨೩॥

ಮತ್ತೇಭ ವಿಕ್ರೀಡಿತ

ಧನಮಂ ಕೀಳ್ವ ದುರಾಶೆಯಿಂದೆ ಸವಿವಾತಾಡುತ್ತೆ ಶ್ರೀಮಂತ
ಮನೆಯಂ ಸೇರ್ವ ಕುಯುಕ್ತಿಗೆಯ್ಯುತಡೆಯಾಡುತ್ತಿರ್ಪನಾವಾಗಳುಂ
ಮನಮೆಂಬೀ ಪಿರಿಗಳ್ಳನಂ ಸಹಿಪೆನೆಂತಾಂ ಸ್ತೇನಪಾ ! ನಿನ್ನಧೀ।-
ನನಗೆಯ್ದಾತನನೆನ್ನೊಳೊಲ್ದು ಕೃಪೆಗೆಯ್! ನಿರ್ದೋಷಿಯೊಳ್ ಶಂಕರ

ತರಳ ವೃತ್ತ

ಗಿರಿಸುತಾಧವ! ನಿನ್ನನರ್ಚಿಪೆನೀಗಲೇ ಕೊಡು ಮುಕ್ತಿಯಂ।
ಹರಿವಿರಿಂಚಿ ಪದಂಗಳಂ ದಿಟವೀವೆ! ತತ್ಫಲಮೆಂದು ನೀಂ ॥
ಧರಿಸುತಾಂ ಮೃಗ-ಪಕ್ಷಿರೂಪವ ನಿನ್ನನೀ ನೆಲ-ಬಾನ್ಗಳೊಳ್ ।
ತಿರುಗಿ ಕಾಣದೆ ತದ್ವಿಷಾದವನೆಂತು ತಾಳ್ವೆನೊ! ಶಂಕರಾ! ॥೨

ಶಿಖರಿಣೀ ವೃತ್ತ

ಸದಾ ವಾ ಕೈಲಾಸೇ ಕನಕಮಣಿಸೌಧೇ ಸಹಗಣೈಃ |
ಶಂಭೋರಗ್ರೇ ಸ್ಫುಟಘಟಿತ ಮೂರ್ಧಾಂಜಲಿಪುಟಃ ||
ಸಾಂಬ ಸ್ವಾಮಿನ್ ಪರಮಶಿವ ಪಾಹೀತಿ ನಿಗದನ್ |
ಣಾಂ ಕಲ್ಪಾನ್ ಕ್ಷಣಮಿವ ವಿನೇಷ್ಯಾಮಿ ಸುಖಿತಃ ||೬೪||

ಶಿಖರಿಣೀ ವೃತ್ತ

ಸ್ತ್ರವೈರ್ಬ್ರಹ್ಮಾದೀನಾಂ ಜಯ ಜಯ ವಚೋಭಿರ್ನಿಯಮಿನಾಂ |
ಾಂ ಕೇಳೀಭಿರ್ಮದಕಲ ಮಹೋಕ್ಷಸ್ಯ ಕಕುದಿ ||
ೀಲಗ್ರೀವಂ ತ್ರಿನಯನಮುಮಾಶ್ಲಿಷ್ಟ ವಪುಷಂ |
ವಂ ಪಶ್ಯೇಯಂ ಕರಧೃತ ಮೃಗಂ ಖಂಡ ಪರಶುಮ್ || ೨೫ ||

ಮತ್ತೇಭ ವಿಕ್ರೀಡಿತ ವೃತ್ತ

ವಸಿವಾ ಬೆಳ್ಳಿಯ ಬೆಟ್ಟದೊಳ್ ಕನಕರತ್ನಾಗಾರದೊಳ್ ತದ್ಗಣಾ |
ತಂ ನೆಲಸಿರ್ದು ಸಾಂಬನಿದಿರೊಳ್ ಹಸ್ತಂಗಳಂ ಜೋಡಿಸಿ ||
ಕ್ಷಾ! ಶಿವ ! ಶಂಭುವೇ ! ವಿಭುವೆ ಸ್ವಾಮಿಾ ರಕ್ಷಿಸೆನ್ನುತ್ತೆ ಸಂ-
ದಂ ನಿಮಿಷಂಬೊಲಾಂ ಕಳೆವೆನೆಂದಾ ಬ್ರಹ್ಮಕಲ್ಪಂಗಳಂ ||೨೪||

ವಾರ್ಧಕ ಷಟ್ಪದಿ

ಅರವಿಂದ ಭವ ಮುಖ್ಯ ದಿವಿಜರುಗ್ಗಡಿಸುತಿರೆ
ಋಷಿ ವಿತತಿ ಜಯ ಜಯ ರವಂಗೆಯ್ಯುತಿರೆ,
ಪ್ರಮಥಾಳಿ ಕುಣಿದಾಡುತಿರೆ, ನಲಿದುಲಿವ ನಂದೀಶನಿಣಿಯ ಮೇಲೆ ||
ತೆಯೊಡನೆ ಕುಳ್ಳಿರ್ದು ಶೋಭಿಪ ಖಂಡ-
! ಪಂಚಾಸ್ಯ ! ನಿಟಿಲಾಕ್ಷ ! ನೀಲಗ್ರೀವ !
ತಕುರಂಗ! ನಿನ್ನನದೆಂದು ಕಣ್ದುಂಬ ಕಾಂಬೆನೋ! ಕರುಣಾಂಬುಧೀ ೨೫||

ಶಿಖರಿಣೀ ವೃತ್ತ

ಕದಾ ವಾ ತ್ವಾಂ ದೃಷ್ಟ್ವಾ ಗಿರಿಶ ತವ ಭವ್ಯಾಂಘ್ರಿಯುಗಳ
ಗೃಹೀತ್ವಾ ಹಸ್ತಾಭ್ಯಾಂ ಶಿರಸಿ ನಯನೇ ವಕ್ಷಸಿ ವಹನ್ ||
ಸಮಾಶ್ಲಿಷ್ಯಾಘ್ರಾಯ ಸ್ಫುಟ ಜಲಜಗಂಧಾನ್ ಪರಿಮಳಾ- |
ನಲಭ್ಯಾಂ ಬ್ರಹ್ಮಾದ್ಯೈರ್ಮುದ ಮನುಭವಿಷ್ಯಾಮಿ ಹೃದಯೇ ||

ಶಿಖರಿಣೀ. ವೃತ್ತ

ಕರಸ್ಥೇ ಹೇಮಾದ್ರೌ ಗಿರಿಶ ನಿಕಟಸ್ಥೇ ಧನಪತೌ |
ಗೃಹಸ್ಥೇ ಸ್ವರ್ಭೂಜಾಮರಸುರಭಿ ಚಿಂತಾಮಣಿಗಣೇ ||
ಶಿರಸ್ಥೇ ಶೀತಾಂಶೌ ಚರಣಯುಗಳಸ್ಥೇಽಖಿಲಶುಭೇ |
ಕಮರ್ಥಂ ದಾಸ್ಯೇಽಹಂ ಭವತು ಭವದರ್ಥಂ ಮಮ ಮನಃ ||

ಮತ್ತೇಭ ವಿಕ್ರೀಡಿತ

ಮೃಡನೇ ! ನಿನ್ನನದೆಂದು ಕಂಡು ತವ ಭವ್ಯಾಂಘ್ರಿದ್ವಯಾಬ್ಜ
ಪಿಡಿದಾಂ ಹಸ್ತಗಳಿಂದೆ ಮಸ್ತಕದೊಳುಂ ನೇತ್ರಂಗಳೊಳ್ ವಕ್ಷದೊಳ್
ಬಿಡದೇ ತಾಳ್ದಮರ್ದಪ್ಪುತಂ ಪದುಳದಿಂದೊಳ್ಗಂಪನಾಘ್ರಾಣಿಸಿ |
ಜಡಜಾತಪ್ರಭವಾದಿಗಳ್ ಪಡೆಯದಿರ್ಪಾನಂದಮಂ ಪೊಂದುವೆಂ ! ||

ಮತ್ತೇಭ ವಿಕ್ರೀಡಿತ ವೃತ್ತ

ಕರದೊಳ್ ಹೇಮನಗಂ ಸಮೀಪದೆ ಧನೇಶಂ ಮಂದಿರಪ್ರಾಂತದ
ಸುರಭೂಜಾಮರಧೇನುಗಳ್ ಪರಮ ಚಿಂತಾರತ್ನಗಳ್ ನಿನ್ನಯ ||
ಶಿರದೊಳ್ ಶೀತಕರಂ ಸಮಸ್ತ ಶುಭಗಳ್ ಪಾದಂಗಳೊಳ್ ತೀವಿರಲ್
ಪರಮೇಶಾ ! ನಿನಗಿನ್ನದೇಂ ಕೊಡುವೆನೆನ್ನೀ ಮಾನಸಂ ನಿನ್ನದೈ ||

ಶಾರ್ದೂಲ ವಿಕ್ರೀಡಿತ

ಾರೂಪ್ಯಂ ತವ ಪೂಜನೇ ಶಿವ ಮಹಾದೇವೇತಿ ಸಂಕೀರ್ತನೇ |
ಸ್ಯಂ ಶಿವಭಕ್ತಿಧುರ್ಯಜನತಾ ಸಾಂಗತ್ಯ ಸಂಭಾಷಣೇ ||
ಕ್ಯಂ ಚ ಚರಾಚರಾತ್ಮಕ ತನುಧ್ಯಾನೇ ಭವಾನೀಪತೇ |
ಜ್ಯಂ ಮಮ ಸಿದ್ಧಮತ್ರ ಭವತಿ ಸ್ವಾಮಿನ್ ಕೃತಾರ್ಥೋಸ್ಮ್ಯಹಂ ||೨೮||

ಶಾರ್ದೂಲ ವಿಕ್ರೀಡಿತ

ತ್ವತ್ಪಾದಾಂಬುಜಮರ್ಚಯಾಮಿ ಪರಮಂ ತ್ವಾಂ ಚಿಂತಯಾಮ್ಯನ್ವಹಂ|
ಶಂ ಶರಣಂ ವ್ರಜಾಮಿ ವಚಸಾ ತ್ವಾಮೇವ ಯಾಚೇ ವಿಭೋ ||
ಮೇ ದಿಶ ಚಾಕ್ಷುಷೀಂ ಸಕರುಣಾಂ ದಿವ್ಯೈಶ್ಚಿರಂ ಪ್ರಾರ್ಥಿತಾಂ |
ಲೋಕಗುರೋ ಮದೀಯ ಮನಸಸ್ಸೌಖ್ಯೋಪದೇಶಂ ಕುರು ||೨೯||

ವಾರ್ಧಿಕ ಷಟ್ಪದಿ

ವ! ನಿನ್ನ ಪೂಜೆಯೊಳು ಸಾರೂಪ್ಯಮಹುದೆನಗೆ
ಹಾದೇವ' ಎನುತಂ ನಿನ್ನ ಸಂಕೀರ್ತ
ನ್ಮೆಯಿಂದೆಸಗುವಲ್ಲಿ ಸಾಮೀಪ್ಯಮಾದಪುದು ಮೇಣ್ ಸಾಲೋಕ್ಯವು ||
ಜನಸಂಗಭಾಷಣಗಳಿಂದಮೊದ
ಚರಾಚರಾತ್ಮಕ ತನುಧ್ಯಾನದೋಳ್
ು ಸಾಯುಜ್ಯಮಿಲ್ಲಿಯೇ ದಿಟದಿನದರಿಂ ದೇವ! ನಾಂ ಧನ್ಯನು ||೨೮||

ಮತ್ತೇಭ ವಿಕ್ರೀಡಿತ ವೃತ್ತ

ುತಂ ನಿನ್ನನೆ ಧ್ಯಾನಿಪೆಂ ! ಶಿವ ಭವತ್ಪಾದಾಬ್ಜಮಂ ಪೂಜಿಪೆಂ !
ಕೈರ್ಪೆನುಮೇಶ ! ನಿನ್ನನನಿಶಂ ಸಂಪ್ರಾರ್ಥಿಪೆಂ ! ನಿನ್ನನೇ ||
ಳ್ ಮಿಗೆ ಬೇಳ್ಪ ನಿನ್ನ ಕರುಣಾಪಾಂಗಂಗಳಿಂದಂ ಜಗ-
, ಶಂಭುವೆ! ನೋಡಿ ಮನ್ಮನಕೆ ಮಾಡೈ ಸೌಖ್ಯಸದ್ಬೋಧೆಯಂ|| ೨೯ ||

ಶಾರ್ದೂಲ ವಿಕ್ರೀಡಿತ

ನಸ್ತ್ರೋದ್ಧೂತವಿಧೌ ಸಹಸ್ರಕರತಾ ಪುಷ್ಪಾರ್ಚನೇ ವಿಷ್ಣು
ಗಂಧೇ ಗಂಧವಹಾತ್ಮತಾऽನ್ನಪಚನೇ ಬರ್ಹಿರ್ಮುಖಾಧ್ಯಕ್ಷತಾ ||
ಪಾತ್ರೇ ಕಾಂಚನಗರ್ಭತಾऽಸ್ತಿ ಮಯಿ ಚೇದ್ಬಾಲೇಂದು ಚೂಡಾ
ಶುಶ್ರೂಷಾಂ ಕರವಾಣಿ ತೇ ಪಶುಪತೇ ಸ್ವಾಮಿನ್ ತ್ರಿಲೋಕೀಗು

ಶಾರ್ದೂಲ ವಿಕ್ರೀಡಿತ

ನಾಲಂ ವಾ ಪರಮೋಪಕಾರಕಮಿದಂ ತ್ವೇಕಂ ಪಶೂನಾಂ
ಪಶ್ಯನ್ ಕುಕ್ಷಿಗತಾನ್ ಚರಾಚರಗಣಾನ್ ಬಾಹ್ಯಸ್ಥಿತಾನ್ ರಕ್ಷಿ
ಸರ್ವಾಮರ್ತ್ಯ ಪಲಾಯನೌಷಧಮತಿ ಜ್ವಾಲಾಕರಂ ಭೀಕರಂ |
ನಿಕ್ಷಿಪ್ತಂ ಗರಳಂ ಗಳೇ ನ ಗಿಳಿತಂ ನೋದ್ಗೀರ್ಣಮೇವತ್ವಯಾ ||

ಮತ್ತೇಭ ವಿಕ್ರೀಡಿತ ವೃತ್ತ

ಪರಿಶುದ್ಧಾಂಬರಮುಂ ಕುಡಲ್ ದಿನಕರಂ ಗಂಧಂಗುಡಲ್
ಪರಮಾನ್ನಂ ಗುಡಲಿಂದಿರಂ, ಸುಮಗಳಿಂದಂ ಪೂಜಿಸಲ್ ಮಾಧ
ಕರಪಾತ್ರಂಗುಡಲಬ್ಜಜಂ ದಿಟದಿನಾನಾದಂದು ಬಾಲೇಂದು ಶೇ- |
ಖರನೇ ಮೂಜಗದೀಶನೇ ! ನೆಗಳಲಾರ್ಪೆಂ ನಿನ್ನ ಶುಶ್ರೂಷೆಯಂ

ವಾರ್ಧಿಕ ಷಟ್ಪದಿ

ಪರಮೋಪಕಾರಿ ನೀನೆಂಬುದಕಿದೊಂದುದಾ-
ಹರಣೆ ಸಾಲದೆ ? ದೇವ! ನಿನ್ನೊಡಲೊಳಿರ್ಪಮೇಣ್
ಪೊರಗಿಹ ಚರಾಚರಂಗಳನೆಲ್ಲ ಬಗೆದಂದವಂ ರಕ್ಷಿಸಲ್ ಕರುಣದೆ ||
ಸುರರ ಗೊಂದಣವ ಬೆನ್ನಟ್ಟಿ ಧಗಧಗಿಪ ದ-
ಳ್ಳುರಿಯನೇ ಹರಡುತ್ತ ಬರ್ಪ ಭೀಕರವಾದ
ಗರಳಮುಂ ಪೀರ್ದು ನೀಂ ನುಂಗದುಗುಳದೆ ಕಂಠಮೊಳೆ ತಾಳ್ದೆ ! ಪ
ಜಯಾ

ಶಾರ್ದೂಲ ವಿಕ್ರೀಡಿತ

ಸ್ವೇಽೋಗ್ರಸ್ಸಕಲಾಮರಾತಿ ಭಯದಃ ಕ್ಷ್ವೇಳಃ ಕಥಂ ವಾ ತ್ವಯಾ |
ಂ ಚ ಕರೇ ಧೃತಃ ಕರತಲೇ ಕಿಂ ಪಕ್ವ ಜಂಬೂ ಫಲಂ ||
ಾಂ ಸಿಹಿತಶ್ಚ ಸಿದ್ಧ ಘುಟಿಕಾ ವಾ ಕಂಠದೇಶೇ ಭೃತಃ |
ನೀಲಮಣಿರ್ವಿಭೂಷಣಮಯಂ ಶಂಭೋ ಮಹಾತ್ಮನ್ವದ ||೩೨||

ಶಾರ್ದೂಲ ವಿಕ್ರೀಡಿತ

ಾಲಂ ವಾ ಸಕೃದೇವ ದೇವ ಭವತಸ್ಸೇವಾ ನತಿರ್ವಾ ನುತಿಃ
ವಾ ಸ್ಮರಣಂ ಕಥಾ ಶ್ರವಣಮಪ್ಯಾಲೋಕನಂ ಮಾದೃಶಾಂ
ರ್ ಸ್ಥಿರದೇವತಾನುಸರಣಾಯಾಸೇನ ಕಿಂ ಲಭ್ಯತೆ
ಮುಕ್ತಿರಿತಃ ಕುತೋ ಭವತಿ ಚೇತ್ಕಿಂ ಪ್ರಾರ್ಥನಿಯಂ ತದಾ ||೩೩||

ವಾರ್ಧಿಕ ಷಟ್ಪದಿ

ುರರನಳ್ಕಿಸಿದ ದಳ್ಳುರಿಯ ನಂಜನದೆಂತು
ದೆ? ಎಂತು ಕಯ್ಯಿಂದದಂ ಪಿಡಿದೆ? ನೀಂ
ೂಳಾಂತೆ ಅದು ಕಳಿತನೇರಿಲಪಣ್ಣೋ! ನೊಣೆಯೆ ನಾಲಗೆಯಮೇಲೆ||
ೂಂಡೆಯದು ಸಿದ್ಧೌಷಧಿಯ ಗುಳಿಗೆಯೋ?
ಳ್ ತಳಿದೆ! ನೀಲರತ್ನದಾಭರಣವೋ?
ನ್ನೊಳ್ ಮಹಾತ್ಮನೆ ಶಂಭುವೇ! ನಿನ್ನ ಮಹಿಮೆಯರಿಯಲಸಾ
ಧ್ಯವು ||೩೨||

ವಾರ್ಧಿಕ ಷಟ್ಪದಿ

ವನಹರನೆ! ಸಾಲದೇನೊಮ್ಮೆ ಮಾತ್ರಂ! ನಿನ್ನ
ನಮನಮರ್ಚನಂ ಸೇವೆ ಮೇಣ್ ಕಥಾ
ಸ್ಮರಣೆ ನಿನ್ನ ಮೂರ್ತಿದರ್ಶನಮಿವರೊಳೊಂದೆ ನನ್ನಂತಹರ್ಗೆ ||
ಮುಕ್ತಿಯದಾವುದಡೆ ಇವರೊಳೊಂದರಿಂ
ನ್ಯ ನಶ್ವರದೇವರಂ ಸೇವಿ
ಷ್ಟದಿಂ ಪೋಪುದೇಂ! ಬಳಿಕ ಬೇಳ್ಪುದೇನವರಿಂದೆ! ಲೋಕನಾಥಾ||೩೩||

ಶಾರ್ದೂಲ ವಿಕ್ರೀಡಿತ

ಕಿಂ ಬ್ರೂಮಸ್ತವ ಸಾಹಸಂ ಪಶುಪತೇ ಕಸ್ಯಾಸ್ತಿ ಶಂಭೋ
ಧೈರ್ಯಂ ಚೇದೃಶಮಾತ್ಮನಸ್ಸ್ಥಿತಿರಿಯಂ ಚಾನ್ಯೈಃ ಕಥಂ ಲಭ
ಭ್ರಶ್ಯದ್ದೇವಗಣಂ ತ್ರಸನ್ಮುನಿಗಣಂ ನಶ್ಯತ್ಪ್ರಪಂಚಂ ಲಯಂ |
ಪಶ್ಯನ್ ನಿರ್ಭಯ ಏಕ ಏವ ವಿಹರತ್ಯಾನಂದಸಾಂದ್ರೋಭವಾನ್

ಶಾರ್ದೂಲ ವಿಕ್ರೀಡಿತ

ಯೋಗಕ್ಷೇಮ ಧುರಂಧರಸ್ಯ ಸಕಲಶ್ರೇಯಃ ಪ್ರದೋದ್ಯೋಗಿ
ದೃಷ್ಟಾದೃಷ್ಟಮತೋಪದೇಶ ಕೃತಿನೋ ಬಾಹ್ಯಾಂತರ ವ್ಯಾಪಿನಃ ||
ಸರ್ವಜ್ಞಸ್ಯ ದಯಾಕರಸ್ಯ ಭವತಃ ಕಿಂ ವೇದಿತವ್ಯಂ ಮಯಾ |
ಶಂಭೋ ತ್ವಂ ಪರಮಾಂತರಂಗ ಇತಿ ಮೇ ಚಿತ್ತೇ ಸ್ಮರಾಮ್ಯನ್ವಹಮ್

ಮತ್ತೇಭ ವಿಕ್ರೀಡಿತ ವೃತ್ತ

ಶಿವಸರ್ವೇಶ್ವರ! ನಿನ್ನ ಸಾಹಸವನೇನೆಂಬೆಂ! ಭವದ್ಧೈರ್ಯಮುಂ
ಭವದೀಯಸ್ಥಿತಿಯುಂ ಮಹಾದ್ಭುತಮಿವನ್ಯರ್ಕಳ್ಗೆದೇಂ ಸಾಧ್ಯಮೋ?
ದಿವಿಜರ್ ಜಾರೆ ಮುನಿವ್ರಜಂ ಬೆದರೆ, ನಾಶಂ ಬೊಂದುತಿರ್ಪೀಪ್ರಪಂ
ಚವನಾಲೋಕಿಸುತಳ್ಕದಿರ್ಪೆ! ಲಯದೋಳ್, ಸಾನಂದದಿಂದೋರ್ವನೇ!

ವಾರ್ಧಿಕ ಷಟ್ಪದಿ

ಕರುಣಾಕರಂಗೆ! ಯೋಗಕ್ಷೇಮ ಭಾರಮಂ |
ಪೊರುವಂಗೆ! ವಿಶ್ವಬಾಹ್ಯಾಂತರ ವ್ಯಾಪಿಗಿಹ
ಪರಸುಖೋಪಾಯಂಗಳಂ ಬೋಧಿಪಂಗೆ! ಸಕಲಶ್ರೇಯಗಳನೀವಗೆ!
ಪರಮೇಶ್ವರಂಗೆ! ಸರ್ವಜ್ಞಂಗೆ! ನಿನಗೆ ಬಾ–
ಯ್ದೆರೆದಾನರಿಕೆಗೆಯ್ದುಕೊಂಬುದೇಂ? ದೇವ! ನೀಂ
ಪರಮಾಪ್ತನೆನಗೆನುತ್ತಳ್ತಿಯಿಂ ಮಾನಸದೊಳಾವಗಂ ಸ್ಮರಿಸುತಿಹೆನು ||

ಶಾರ್ದೂಲ ವಿಕ್ರೀಡಿತ

ಭಕ್ತ್ಯೋ ಭಕ್ತಿಗುಣಾವೃತೇ ಮುದಮೃತೇ ಪೂರ್ಣೇ ಪ್ರಸನ್ನೇ ಮನಃ |
ೀ ಸಾಂಬ ತವಾಂಘ್ರಿಪಲ್ಲವಯುಗಂ ಸಂಸ್ಥಾಪ್ಯ ಸಂವಿತ್ಫಲಮ್ ||
ಂ ಮಂತ್ರಮುದೀರಯನ್ ನಿಜ ಶರೀರಾಗಾರಶುದ್ಧಿಂ ವಹನ್ |
್ಯಹಂ ಪ್ರಕಟೀಕರೋಮಿ ರುಚಿರಂ ಕಲ್ಯಾಣಮಾಪಾದಯನ್ || ೩೬ ||

ಶಾರ್ದೂಲ ವಿಕ್ರೀಡಿತ

ಆಮ್ನಾಯಾಂಬುಧಿಮಾದರೇಣ ಸುಮನಸ್ಸಂಘಾಸ್ಸಮುದ್ಯನ್ಮನೋ |
ಾನಂ ದೃಢ ಭಕ್ತಿರಜ್ಜು ಸಹಿತಂ ಕೃತ್ವಾ ಮಥಿತ್ವಾ ತತಃ ||
ುಂ ಕಲ್ಪತರುಂ ಸುಪರ್ವಸುರಭಿಂ ಚಿಂತಾಮಣಿಂ ಧೀಮತಾಂ |
ನಂದ ಸುಧಾಂ ನಿರಂತರ ರಮಾ ಸೌಭಾಗ್ಯಮಾತನ್ವತೇ || ೩೭ ||

ವಾರ್ಧಿಕ ಷಟ್ಪದಿ

ಮೃಡನೆ ! ತೋಷಸುಧೆದೀವಿದ ವಿಮಲ ಮನಮೆಂಬ
ಕೆ ಸದ್ಭಕ್ತಿ ಗುಣಮೆಂಬ ನೂಲ್ ಸುತ್ತಿ ನಿ–
ಿರ್ಗಳನೊಲುಮೆಯಿಂದಿರಿಸಿ ಸುಜ್ಞಾನಮೆಂಬ ತೆಂಗಾಯನಿಟ್ಟು ||
ತಾರಕಸತ್ವ ಮಂತ್ರಮಂ ಜಪಿಸುತೆ–
ಲ್ಪನೆಯ ಪರಿಶುದ್ಧಿಗೆಯ್ದು ಕಲ್ಯಾಣಮಂ
ದಿನನುಗೊಳಿಸಿ ಭಕ್ತನಾಂ ಸಮ್ಮುದದಿ ಪುಣ್ಯಾಹಮಂ ಮಾಳ್ಪೆನು ||೩೬||

ಮತ್ತೇಭ ವಿಕ್ರೀಡಿತ

ತದಾಮ್ನಾಯ ಪಯೋಧಿಯಂ ಸುಮನಸರ್ ಸದ್ಭಾವ ಮಂಥಾನದೊಳ್
ಸದ್ಭಕ್ತಿಸುರಜ್ಜುವಂ ತೊಡರ್ಚುತೊಳ್ಪಿಂ ಮಂಥನಂ ಗೆಯ್ಯುತಂ ||
ರ್ ಸ್ವರ್ಮಣಿ - ಸೋಮ - ಕಾಮದುಘ - ಕಲ್ಪೋರ್ವೀಜ ಸದ್ರೂಪನಂ
! ನಿನ್ನಂ ನಿಜ ನಿತ್ಯಸೌಖ್ಯಸುಧೆಯಂ ಸೌಭಾಗ್ಯಸಲ್ಲಕ್ಷ್ಮಿಯಂ || ೩೭ ||

ಶಾರ್ದೂಲ ವಿಕ್ರೀಡಿತ

ಪ್ರಾಕ್ಪುಣ್ಯಾಚಲ ಮಾರ್ಗದರ್ಶಿತ ಸುಧಾ ಮೂರ್ತಿಃ ಪ್ರಸ
ಸೋಮಸ್ಸದ್ಗುಣಸೇವಿತೋ ಮೃಗಧರಃ ಪೂರ್ಣಸ್ತಮೋನಾಶಕಃ |
ಚೇತಃ ಪುಷ್ಕರಲಕ್ಷಿತೋ ಭವತಿ ಚೇದಾನಂದ ಪಾಥೋ ನಿಧಿಃ |
ಪ್ರಾಗಲ್ಭ್ಯೇನ ವಿಜೃಂಭತೇ ಸುಮನಸಾಂ ವೃತ್ತಿಸ್ತದಾ ಜಾಯತೇ

ಶಾರ್ದೂಲ ವೃತ್ತ

ಧರ್ಮೋ ಮೇ ಚತುರಂಘ್ರಿಕಸ್ಸುಚರಿತಃ ಪಾಪಂ ವಿನಾಶಂ
ಕಾಮಕ್ರೋಧಮದಾದಯೋ ವಿಗಳಿತಾಃ ಕಾಲಸ್ಸುಖಾವಿಷ್ಕೃತಃ ||
ಜ್ಞಾನಾನಂದಮಹೌಷಧಿಸ್ಸುಫಲಿತಾ ಕೈವಲ್ಯನಾಥೇ ಸದಾ
ಮಾನ್ಯೇ ಮಾನಸಪುಂಡರೀಕನಗರೇ ರಾಜಾವತಂಸೇ ಸ್ಥಿತೇ ||೩೯||

ವಾರ್ಧಿಕ ಷಟ್ಪದಿ

ಪೊಳೆವಮೃತ ರೂಪಮುಂ ಪೂರ್ವಪುಣ್ಯಾದ್ರಿ ಪಥ-
ದೊಳು ತೋರ್ಪ ಪ್ರಥಿತ ಸೋಮಂ ಪ್ರಸನ್ನಂ ಶಿವಂ
ಕಳೆವೆತ್ತ ಮೃಗಧರಂ ಸದ್ಗುಣ ಸುಸೇವಿತಂ ಪೂರ್ಣಂ ತಮೋನಾಶಕಂ
ಥಳಥಳಿಸುತಂ ಮಾನಸಾಕಾಶದಲ್ಲಿ ಕಂ-
ಗೊಳಿಸಿದೊಡೆ, ಪೆರ್ಚಿಯುಕ್ಕುವುದು ! ಪರಮಾನಂದ-
ಜಳಧಿಗಾಂಭೀರ್ಯದಿಂದಂದು ಸದ್ವೃತ್ತಿಯುಂಟಾದಪುದು! ಸುಮನಸಗೆ

ಮತ್ತೇಭ ವಿಕ್ರೀಡಿತ

ನಡೆಗುಂ ಧರ್ಮವದಿನ್ನು ನಾಲ್ಕಡಿಗಳಿಂದಂ ಪಾಪಮುಂ ನಾಶ
ಪಡೆಗುಂ ಷಡ್ರಿಪುಗಳ್ ಕೆಲಂದೆಗೆವವಾ ಕಾಲಂ ಸುಖಂದಾಯಕಂ ||
ಕೊಡುಗುಂ ಚಿತ್ಸುಖ ಸಸ್ಯಗಳ್ ಸುಫಲಮಂ ಮೋಕ್ಷಾಧಿಪಂ ವಾಸಿಸ
ಜಿಸಗಿಂ ಮಾನಸಪುಂಡರೀಕಪುರದೊಳ್ ರಾಜಾವತಂಸಂ ಸದಾ ||೪

ಶಾರ್ದೂಲ ವಿಕ್ರೀಡಿತ

ಧೀ ಯಂತ್ರೇಣ ವಚೋಘಟೇನ ಕವಿತಾಕುಲ್ಯೋಪಕುಲ್ಯಾಕ್ರಮೈಃ |
ಶೈಶ್ಚ ಸದಾಶಿವಸ್ಯ ಚರಿತಾಂಭೋರಾಶಿ ದಿವ್ಯಾಮೃತೈಃ ||
ದಾರಯುತಾಶ್ಚ ಭಕ್ತಿಕಲಮಾಸ್ಸಾಫಲ್ಯಮಾತನ್ವತೇ |
ಕ್ಷಾಸ್ಮಮ ಸೇವಕಸ್ಯ ಭಗವನ್ವಿಶ್ವೇಶ ಭೀತಿಃ ಕುತಃ ||೪೦||

ಶಾರ್ದೂಲ ವಿಕ್ರೀಡಿತ

ಪಾಪೋತ್ಪಾತ ವಿಮೋಚನಾಯ ರುಚಿರೈಶ್ವರ್ಯಾಯ ಮೃತ್ಯುಂಜಯ
ರ್ಧ್ಯಾನ ನತಿ ಪ್ರದಕ್ಷಿಣ ಸಪರ್ಯಾಲೋಕನಾ ಕರ್ಣನೇ ||
ಚಿತ್ತಶಿರೋಂಘ್ರಿ ಹಸ್ತನಯನ ಶ್ರೋತ್ರೈರಹಂ ಪ್ರಾರ್ಥಿತೋ |
ಾಜ್ಞಾಪಯ ತನ್ನಿರೂಪಯ ಮುಹುರ್ಮಾಮೇವ ಮಾಮೇಽವಚಃ
|| ೪೧ ||

ವಾರ್ಧಿಕ ಷಟ್ಪದಿ

ಮತಿಯೆಂಬ ರಾಟೆಯಿಂದಂ ವಚನಘಟದಿಂ ಕ-
ಂದೆಂಬ ಕಾಲ್ ಪರಿಕಾಲ್ಗಳಿಂ ಬಿಡದೆ
ಚರಿಯಿಸಿ ತಂದ ನಿನ್ನ ಸುಚರಿತ್ರಾಂಬುಧಿಯ ದಿವ್ಯವಾದಮೃತದಿಂ ||
ಮಾನಸಮೆಂಬ ಗದ್ದೆಯೊಳಗಿಹ ಸದುಬ-
ಂಬ ನೆಲ್ಲುಗಳ ಪೈರು ಪೊಂದುವುದು ಸಫ-
ಸದರಿಂದೆ ನಿನ್ನಾಳ್ಗೆನಗೆ ಕ್ಷಾಮಭಯವೆಲ್ಲಿಯದು ? ವಿಶ್ವನಾಥಾ ||೪೦||

ವಾರ್ಧಿಕ ಷಟ್ಪದಿ

ದುರಿತವೆಂದೆಂಬರಿಷ್ಟದ ನಿವಾರಣೆಯಾಗಿ
ರೈಶ್ವರ್ಯವಡೆವುದಕೆ ನಿನ್ನಂ ನಿತ್ಯ
ರ್ಚಿಸಲೆರಗಲಾಕರ್ಣಿಸಲ್ ಬಲವರಲ್ ನುತಿಸಲಾಲೋಕಿಸಲ್ ||
ನನ್ನೀ ಮನ, ಕೈ, ತಲೆ, ಕೊಡಂಕೆಗಳ್
ಳ್, ರಸನೆ, ಕಣ್ಗಳ್ ಬೇಳ್ಪವೆನ್ನನನ-
ೀಂ ಬೆಸಸುತೆನ್ನಿಂದಿವಂ ಮಾಡಿಸೆನ್ನೊಳ್ ಮೂಕತನವು ಬೇಡ ! ||೪೧||

ಶಾರ್ದೂಲ ವಿಕ್ರೀಡಿತ

ಗಾಂಭೀರ್ಯಂ ಪರಿಖಾಪದಂ ಘನಧೃತಿಃ ಪ್ರಾಕಾರ ಉದ್ಯದ್ಗು
ಸ್ತೋಮಶ್ಚಾಪ್ತಬಲಂ ಘನೇಂದ್ರಿಯ ಚಯೋ ದ್ವಾರಾಣಿ ದೇಹ ಸ್ಥಿತಃ
ವಿದ್ಯಾವಸ್ತು ಸಮೃದ್ಧಿರಿತ್ಯಖಿಲ ಸಾಮಗ್ರೀ ಸಮೇತೇ ಸದಾ।
ದುರ್ಗಾತಿ ಪ್ರಿಯದೇವ ಮಾಮಕ ಮನೋದುರ್ಗೇ ನಿವಾಸಂ ಕುರು ||

ಶಾರ್ದೂಲ ವಿಕ್ರೀಡಿತ

ಮಾಗಚ್ಛ ತ್ವಮಿತ ಸ್ತತೋ ಗಿರಿಶ ಭೋ ಮಯ್ಯೇವ ವಾಸಂ ಕು
ಸ್ವಾಮಿನ್ನಾದಿ ಕಿರಾತ ಮಾಮಕ ಮನಃ ಕಾಂತಾರ ಸೀಮಾಂತರೇ ||
ವರ್ತಂತೇ ಬಹವೋ ಮೃಗಾ ಮದಜುಷೋ ಮಾತ್ಸರ್ಯ ಮೋಹಾದ
ಸ್ತಾನ್ ಹತ್ವಾ ಮೃಗಯಾ ವಿನೋದ ರುಚಿತಾಲಾಭಂ ಚ ಸಂಪ್ರಾಪ್ಸ್ಯಸಿ

ವಾರ್ಧಿಕ ಷಟ್ಪದಿ

ಗಾಂಭೀರ್ಯಮೆಂಬಾಳವಾದಗಳದಿಂ ಧೈರ್ಯ—
ಮೆಂಬ ಬಂಧುರ ಕೋಟೆಯಿಂ ಸದ್ಗುಣಗಳೆಂಬ
ನಂಬುಗೆಯ ಸೇನೆಯಿಂ ದೇಹದಲ್ಲಿರ್ದಿಂದ್ರಿಯಗಳೆಂಬ ಬಾಗಿಲ್ಗಳಿಂ ||
ಇಂಬುವಡೆದಿರ್ದ ವಿದ್ಯಾವಸ್ತು ನಿಕರದಿಂ
ತುಂಬಿರ್ದ್ದ ಸಕಲ ಸಾಮಗ್ರಿಯಿಂದೊಪ್ಪಿಹುದು
ಸಾಂಬ ನೀಂ ದುರ್ಗಾನುರಾಗಿ! ನನ್ನೀ ಮನೋದುರ್ಗದೊಳನಿಶ ವಾಸಿಸೈ

ಮತ್ತೇಭ ವಿಕ್ರೀಡಿತ

ನಲುವಿಂದೆನ್ನೊಳಿರತ್ತಮಿತ್ತಲೆಯದಿರ್ ! ಮನ್ಮಾನಸಾರಣ್ಯದೊಳ
ನೆಲಸಿರ್ಪ್ಪುಂ ! ಮದಿಸಿರ್ದನೇಕ ಮೃಗಗಳ್ ಮಾತ್ಸರ್ಯ ಮೋಹಾದಿಗಳ್
ಎಲೆಲೈ ! ಆದಿ ಕಿರಾತನೇ ! ಗಿರಿಶನೇ ! ಆ ಶ್ವಾಪದ ವ್ರಾತಮಂ।
ಕೊಲುತಂ ನೀಂ ಮೃಗಯಾ ವಿನೋದ ಸುಖಮೆಂಬಿಷ್ಟಾರ್ಥಮಂ
ಪೊಂದುವೆಯ್ ||

### ಮಾಲ್ಯಭಾರಾ ವೃತ್ತ

ಕರಲಗ್ನಮೃಗಃ ಕರೀಂದ್ರ ಭಂಗೋ |
ಶಾರ್ದೂಲ ವಿಖಂಡ ನೋಸ್ತ ಜಂತುಃ ||
ೋ ವಿಶದಾ ಕೃತಿಶ್ಚ ಚೇತಃ |
ರೇ ಪಂಚ ಮುಖೋಽಸ್ತಿ ಮೇ ಕುತೋಭೀಃ || ೪೪ ||

### ಶಾರ್ದೂಲ ವಿಕ್ರೀಡಿತ

ಛಂದಶ್ಶಾಖಿ ಶಿಖಾನ್ವಿತೈರ್ದ್ವಿಜ ವರೈಸ್ಸಂಸೇವಿತೇ ಶಾಶ್ವತೇ |
ಾಪಾದಿನಿ ಖೇದ ಭೇದಿನಿ ಸುಧಾಸಾರೈಃ ಫಲೈರ್ದೀಪಿತೇ ||
ಃ ಪಕ್ಷಿ ಶಿಖಾಮಣೀ ತ್ಯಜ ವೃಥಾ ಸಂಚಾರಮನ್ಯೈರಲಂ |
ಂ ಶಂಕರ ಪಾದಪದ್ಮಯುಗಳೇ ನೀಡೇ ವಿಹಾರಂ ಕುರು || ೪೫ ||

### ಮತ್ತೇಭ ವಿಕ್ರೀಡಿತ

ದೊಳ್ ಸಮ್ಮುದದಿಂದೆ ತಾಳ್ದು ಮೃಗಮಂ ದುರ್ವ್ಯಾಘ್ರಮಂ ಕೊಂದು ಸ-
ಂ ಸೀಳ್ದು ಗಜೇಂದ್ರನಂ, ನಿಖಿಳ ಜಂತು ಸ್ತೋಮವನ್ನೋಡಿಸಿ, ||
ಂ ತಾನೆನಿಸಿರ್ದು, ಮೇಣ್ ವಿಶದ ರೂಪಂ ತಾಳ್ದು ರಾರಾಜಿಪಾ |
ಪಂಚಾಸ್ಯನೆ, ಎನ್ನ ಹೃತ್ಕುಹರದೊಳ್ ಕುಳ್ಳಿರ್ದನಿನ್ನೇಂ ಭಯಂ ? ||೪೪||

### ವಾರ್ಧಿಕ ಷಟ್ಪದಿ

ಶ್ರುತಿಯೆಂಬ ಪೆರ್ಮರದ ಕೊನೆಯ ತುದಿಯಲ್ಲಿರ್ಪ–
ಸದ್ವಿಜವತ ಸೇವಿತಮಾದ, ಮೇಣ್ ಸುಶಾ–
ಮಾದ, ಕಷ್ಟಹರ - ಸೌಖ್ಯದಾಯಕ - ಸುಧಾ ಫಲಗಳಿಂ ಪರಿಶೋಭಿಪ ||
ಳನ ಚರಣಾಬ್ಜಯುಗಮೆಂಬ ಗೂಡಿನೊಳ್
ಮಾನಂದದಿಂದಂ ವಿಹಾರವ ಮಾಡು !
ಗೆಟ್ಟು ನೀಂ ಬೇರೆಡೆಯೊಳಲೆವುದಂ ಮಾಣ್! ಮನಃ ಪಕ್ಷಿ ಚೂಡಾಮಣೀ!
|| ೪೫ ||

ಶಾರ್ದೂಲ ವಿಕ್ರೀಡಿತ

ಆಕೀರ್ಣೇ ನಖರಾಜಿ ಕಾಂತಿ ವಿಭವೈ ರುದ್ಯತ್ಸುಧಾ ವೈಭವೈ |
ರಾಧೌತೇಽಪಿ ಚ ಪದ್ಮರಾಗ ಲಲಿತೇ ಹಂಸವ್ರಜೈರಾಶ್ರಿತೇ ||
ನಿತ್ಯಂ ಭಕ್ತಿ ವಧೂಗಣೈಶ್ಚ ರಹಸಿ ಸ್ವೇಚ್ಛಾ ವಿಹಾರಂ ಕುರು |
ಸ್ಥಿತ್ವಾ ಮಾನಸ ರಾಜಹಂಸ ಗಿರಿಜಾನಾಥಾಂಘ್ರಿ ಸೌಧಾಂತರೇ || ೪೬ ||

ಶಾರ್ದೂಲ ವಿಕ್ರೀಡಿತ

ಶಂಭುಧ್ಯಾನ ವಸಂತಸಂಗಿನಿ ಹೃದಾರಾಮೇಽಘ ಜೀರ್ಣಚ್ಛದಾ |
ಸ್ರಸ್ತಾ ಭಕ್ತಿಲತಾಚ್ಛಟಾ ವಿಲಸಿತಾಃ ಪುಣ್ಯಪ್ರವಾಳಾಶ್ರಿತಾಃ ||
ದೀಪ್ಯಂತೇ ಗುಣಕೋರಕಾ ಜಪವಚಃ ಪುಷ್ಪೈಶ್ಚ ಸದ್ವಾಸನಾಃ |
ಜ್ಞಾನಾನಂದ ಸುಧಾ ಮರಂದ ಲಹರೀ ಸಂವಿತ್ಫಲಾಭ್ಯುನ್ನತಿಃ || ೪೭ ||

ವಾರ್ಧಿಕ ಷಟ್ಪದಿ

ಉಗುರುಗಳ ಪೊಳಪಿನಿಂ ಸುಪ್ರಕಾಶಿತಮಾಗಿ,
ಪೊಗರೊಗುವ ಸೊದೆಯ ಸೊಬಗಿಂದೆ ನಿರ್ಮಲಮಾಗಿ,
ಮಿಗೆ ಪದ್ಮರಾಗ ರಂಜಿತಮಾಗಿ, ಹಂಸತತಿಗಾಶ್ರಯಮನಿತ್ತು ಮೆರೆವ ||
ನಗಜಾಧವಾಂಘ್ರಿ ಸೌಧದೊಳಿರ್ದು ನೀಂ ನಿತ್ಯ
ಸೊಗಯಿಸುವ ಭಕ್ತಿವಧುಗಳೊಡನೇಕಾಂತದೊಳ್
ಬಗೆವಂದ ತೆರದಿಂ ವಿಹಾರಗೆಯ್ ಎನ್ನ ಮಾನಸ ರಾಜಹಂಸ ! ಮುದದಿ ||ಸೈ

ವಾರ್ಧಿಕ ಷಟ್ಪದಿ

ಒದವಲ್ ಶಿವಧ್ಯಾನಮೆನಿಸುವ ವಸಂತಋತು
ಹೃದಯೋಪವನದೊಳ್ ದುರಿತ ಜೀರ್ಣಪರ್ಣಂಗ-
ಉದುರುವವು ಭಕ್ತಿಲತೆಗಳ ಕುಡಿಗಳೊಪ್ಪುವವು ಪುಣ್ಯಪಲ್ಲವಗಳೊಡನೆ ||
ಪೊದಳ್ದ ಸುಗುಣಾಳಿ ಮುಕುಳಂ ಮಂತ್ರಪುಷ್ಪಗಳ್
ಪುದಿದ ಸದ್ವಾಸನೆ, ಸುಚಿತ್ಸುಖಾಮೃತ ಮರಂ-
ದದ ಲಹರಿ ಸುಜ್ಞಾನ ಫಲದಭ್ಯುದಯಮೆಯ್ದೆ ತೋರುವವು ರಮ್ಯವಾಗಿ ||

### ಶಾರ್ದೂಲ ವಿಕ್ರೀಡಿತ

ತ್ಯಾನಂದರಸಾಲಯಂ ಸುರಮುನಿ ಸ್ವಾಂತಾಂಬುಜಾತಾಶ್ರಯಂ ।
ಸದ್ದ್ವಿಜ ಸೇವಿತಂ ಕಲುಷ ಹೃತ್ಸದ್ವಾಸನಾ ವಿಸ್ಮೃತಮ್ ॥
ರ್ಧ್ಯಾನ ಸರೋವರಂ ವ್ರಜ ಮನೋಹಂಸಾವತಂಸ ಸ್ಥಿರಂ ।
ನ್ಯಾಶ್ರಯ ಪಲ್ವಲ ಭ್ರಮಣ ಸಂಜಾತಶ್ರಮಂ ಪ್ರಾಪ್ಸ್ಯಸಿ ॥ ೪೮ ॥

### ಶಾರ್ದೂಲ ವಿಕ್ರೀಡಿತ

ನಂದಾಮೃತಪೂರಿತಾ ಹರಪದಾಂಭೋಜಾಲವಾಲೋದ್ಗತಾ ।
ರ್ಯಪಕ್ಷಮುಪೇತ್ಯ ಭಕ್ತಿಲತಿಕಾ ಶಾಖೋಪಶಾಖಾನ್ವಿತಾ ॥
ಮರ್ಶಾನಸಕಾಯಮಾನ ಪಟಲೀಮಾಕ್ರಮ್ಯ ನಿಷ್ಕಲ್ಮಷಾ ।
ಭೀಷ್ಟಫಲಪ್ರದಾ ಭವತು ಮೇ ಸತ್ಕರ್ಮ ಸಂವರ್ಧಿತಾ ॥ ೪೯ ॥

### ವಾರ್ಧಿಕ ಷಟ್ಪದಿ

ಚಿರಸುಖಾಮೃತದ ನಿಧಿ ಸದ್ವಿಜಸುಸೇವಿತಂ,
ಮುನಿ ನಿಕರ ಹೃದಯ ಕಮಲಗಳಿಗಾಶ್ರಯಂ,
ನಮಂ ನಿರ್ಮಲಂ, ಮೇಣ್ ಕಲುಷ ನಾಶಕಂ ಸದ್ವಾಸನಾಪೂರಿತಂ ॥
ಹರ ಧ್ಯಾನಮೆಂದೆಂಬ ಪೆರ್ಗೊಳಮಿದಂ
ತಮಾಶ್ರಯಿಸು ಮಾನಸರಾಜಹಂಸ ! ನೀಂ
ನೀಚಾಶ್ರಯಮೆನಿಪ ಗುಂಡಿಯೊಳ್ ತೊಳಲ್ದೇಕೆ ಶ್ರಮಮಂ
ಪೊಂದುವೆ ॥೪೮॥

### ವಾರ್ಧಿಕ ಷಟ್ಪದಿ

ಪರತರಾನಂದಾಮೃತದಿನೆಯ್ದೆ ತೀವಿರ್ದ
ದಾಂಬುಜ ಮೆಂದೆನಿಪ ಪಾಳಿಯೊಳ್ ಮೊಳೆತು
ತೆಯೆಂಬಾಧಾರಮಂ ಪಿಡಿದು ಬೆಳೆದು ಶಾಖೋಪಶಾಖೆಗಳನಾಂತು ॥
ತರೋನ್ನತಮಾದ ಮಾನಸಮೆನಿಪ್ಪ ಹಂ–
ಸನಾಕ್ರಮಿಸಿ ಸತ್ಕರ್ಮದಿಂ ಮಡಲ್ತಮಲ
ಕ್ತಿಲತೆಯೆನಗೆ ಕುಡುಗೆ ನಿತ್ಯಾಭೀಷ್ಟ ಫಲಮನತಿ ಶೀಘ್ರಮಾಗಿ ॥ ೪೯ ॥

ಶಾರ್ದೂಲ ವಿಕ್ರೀಡಿತ

ಸಂಧ್ಯಾರಂಭ ವಿಜೃಂಭಿತಂ ಶ್ರುತಿಶಿರಸ್ಸ್ಥಾನಾಂತರಾಧಿಷ್ಠಿ
ಸಪ್ರೇಮ ಭ್ರಮರಾಭಿರಾಮ ಮಸಕೃತ್ಸದ್ವಾಸನಾ ಶೋಭಿತಂ ||
ಭೋಗೀಂದ್ರಾಭರಣಂ ಸಮಸ್ತಸುಮನಃ ಪೂಜ್ಯಂ ಗುಣಾ ವಿಷ್ಕೃ
ಸೇವೇ ಶ್ರೀಗಿರಿ ಮಲ್ಲಿಕಾರ್ಜುನ ಮಹಾಲಿಂಗಂ ಶಿವಾಲಿಂಗಿತಮ್

ಶಾರ್ದೂಲ ವಿಕ್ರೀಡಿತ

ಭೃಂಗೀಚ್ಛಾನಟನೋತ್ಕಟಃ ಕರಿಮದಗ್ರಾಹೀ ಸ್ಫುರನ್ಮಾಧ
ಹ್ಲಾದೋ ನಾದಯುತೋ ಮಹಾಸಿತವಪುಃ ಪಂಚೇಷುಣಾ ಚಾ
ಸತ್ಪಕ್ಷಸ್ಸು ಮನೋವನೇಷು ಸ ಪುನಸ್ಸಾಕ್ಷಾನ್ಮದೀಯೇ ಮನೋ
ರಾಜೀವೇ ಭ್ರಮರಾಧಿಪೋ ವಿಹರತಾಂ ಶ್ರೀಶೈಲವಾಸೀ ವಿಭುಃ ||

ವಾರ್ಧಿಕ ಷಟ್ಪದಿ

ಅತುಲ ಸಂಧ್ಯಾಸಮಯದೊಳ್ ಸಮುತ್ಸಾಹಿತಂ,
ಶ್ರುತಿ ಶಿರಸ್ಥಾನದೊಳ್ ಸಮಧಿಷ್ಠಿತಂ, ಪ್ರೇಮ-
ಯುತ ಲಸದ್ಭ್ರಮರಾಭಿರಾಮಂ, ಸುಲಲಿತ ಸದ್ವಾಸನಾಸಂಪೂರಿತ
ನುತಗುಣಯುತಂ, ಭೋಗಿ ಭೂಷಣಂ ಸುಮನಃ ಪ್ರ-
ವಿತತಿ ಪೂಜ್ಯಂ ಸ್ವೀಕರಿಸಲೆನ್ನ ಸೇವೆಯಂ
ಸತತಮಾ ಶ್ರೀಶೈಲ ಮಲ್ಲಿಕಾರ್ಜುನ ಮಹಾಲಿಂಗಂ ಶಿವಾಲಿಂಗಿತಂ

ವಾರ್ಧಿಕ ಷಟ್ಪದಿ

ಕರಿಯ ಮದಮಂ ಪೀರ್ದು, ಮಾಧವಾಹ್ಲಾದಮಂ
ನೆರೆ ಪೆರ್ಚುಗೊಳಿಸಿ, ಸುಮಸಾಯಕಾದೃತನಾಗಿ,
ಸರಸನಾದವನಾಂತು, ಭೃಂಗಿಯ ಬಯಕೆಯಂತೆ ನಲಿದು ನಟನಂಗೆ
ಸಿರುತಂ ಮಹಾಸಿತ ಶರೀರದಿಂ ಶೋಭಿಸುತ,
ಪರಮ ಸುಮನೋವನದಿ ಸತ್ಪಕ್ಷಮಂ ತಳೆದು,
ಮೆರೆವ ಭ್ರಮರಾಧಿಪಂ ಶ್ರೀಶೈಲವಾಸನೆನ್ನ ಮನೋಜ್ಜದೊಳ್ ವಿಹರಿಕೆ




...ರುಣ್ಯಾಮೃತವರ್ಷಿಣಂ ಘನವಿಪದ್ಗ್ರೀಷ್ಮಚ್ಛಿದಾಕರ್ಮಠಂ ।
...ಸ್ಯಫಲೋದಯಾಯ ಸುಮನಸ್ಸಂ ಸೇವ್ಯಮಿಚ್ಛಾಕೃತಿಂ ॥
...ಕ್ತಮಯೂರಮದ್ರಿನಿಲಯಂ ಚಂಚಜ್ಜಟಾ ಮಂಡಲಂ ।
...ೕ ವಾಂಛತಿ ನೀಲಕಂಧರ ಸದಾ ತ್ವಾಂ ಮೇ ಮನಶ್ಚಾತಕಃ ॥ ೫೨ ॥

ಶಾರ್ದೂಲ ವಿಕ್ರೀಡಿತ

...ಕಾಶೇನ ಶಿಖೀ ಸಮಸ್ತಫಣಿನಾಂ ನೇತಾ ಕಲಾಪೀ ನತಾ ।
...ರ್ಣೋ ಪ್ರಣವೋಪದೇಶ ನಿನದೈಃ ಕೇಕೀತಿ ಯೋ ಗೀಯತೇ ॥
...ಂ ಶೈಲಸಮುದ್ಭವಾಂ ಘನರುಚಿಂ ದೃಷ್ಟ್ವಾನಟಂತಂ ಮುದಾ ।
...ತೋಪವನೇ ವಿಹಾರರಸಿಕಂ ತಂ ನೀಲಕಂಠಂ ಭಜೇ ॥ ೫೩ ॥





ವಾರ್ಧಿಕ ಷಟ್ಪದಿ

ಕರುಣಾಮೃತವನು ಸುರಿಸುವ ಘನ ವಿಪದ್ಗ್ರೀಷ್ಮ-
...ಪಮಂ ಕಳೆವ, ಸುಜ್ಞಾನ ಸಸ್ಯಫಲ-
...ುಮನಸರಿಂ ಸುಸೇವ್ಯನಾಗಿರ್ಪ ಭಕ್ತಮಯೂರಮಂ ಕುಣಿಸುವ ॥
...ಯನಾಗಿ ಚಂಚಜ್ಜಟಾಧಾರಿಯಾ-
...ರ್ಗ, ಸ್ವೇಚ್ಛಾಕೃತಿಯ ಧರಿಪ ನೀಲಕಂ-
...ನ್ನನಿಚ್ಛಿಪುದು ನಿರುತಮೆನ್ನಯ ಮನಶ್ಚಾತಕಂ ತ್ರೀಶಂಭುವೇ ॥೫೨॥

ವಾರ್ಧಿಕ ಷಟ್ಪದಿ

ಗಗನದಿಂ ಶಿಖಿಯೆಂಬ ನಾಮಮಂ ಪೊಂದಿ ಫ-
...ಜನಿಂ ಕಲಾಪಿಯೆನಿಪ ಪೆಸರ್ದಳೆದು
...ತೇಷ್ಟಾರ್ಥದ ಪ್ರಣವ ಬೋಧನಿನಾದದಿಂ ಕೇಕಿಯೆಂದೆನಿಸುತೆ ॥
...ಳುದಿಸಿದ ನೀಲಘನ ಕಾಂತಿಯಂ ನೋಡು
...ಮಿಗೆಯ ಹರುಷದಿಂ ನರ್ತನಂಗೆಯ್ಯುತಂ,
...ಂತ ವನದಲ್ಲಿ ನಲಿದಾಡುತಿಹ ನೀಲಕಂಠನಂ ಭಜಿಸೆನನಿಶಂ! ॥ ೫೩ ॥

ಶಾರ್ದೂಲ ವಿಕ್ರೀಡಿತ

ಸಂಧ್ಯಾಘರ್ಮ್ಮದಿನಾತ್ಯಯೋ ಹರಿಕರಾಘಾತ ಪ್ರಭೂತಾನಕ
ಧ್ವಾನೋ ವಾರಿದ ಗರ್ಜಿತಂ ದಿವಿಷದಾಂ ದೃಷ್ಟಿಚ್ಛಟಾ ಚಂಚಲಾ
ಭಕ್ತಾನಾಂ ಪರಿತೋಷ ಬಾಷ್ಪವಿತತಿರ್ವೃಷ್ಟಿರ್ಮಯೂರೀ ಶಿವಾ |
ಯಸ್ಮಿನ್ನುಜ್ವಲತಾಂಡವಂ ವಿಜಯತೇ ತಂ ನೀಲಕಂಠಂ ಭಜೇ ||

ಶಾರ್ದೂಲ ವಿಕ್ರೀಡಿತ

ಆದ್ಯಾಯಾಮಿತತೇಜಸೇ ಶ್ರುತಿಪದೈರ್ವೇದ್ಯಾಯ ಸಾಧ್ಯಾ
ವಿದ್ಯಾನಂದ ಮಯಾತ್ಮನೇ ತ್ರಿಜಗತಸ್ಸಂರಕ್ಷಣೋದ್ಯೋಗಿನೇ ||
ಧ್ಯೇಯಾಯಾಖಿಲ ಯೋಗಿಭಿಸ್ಸುರ ಗಣೈರ್ಗೇಯಾಯ ಮಾಯಾ
ಸಮ್ಯಕ್ತಾಂಡವ ಸಂಭ್ರಮಾಯ ಜಟಿನೇ ಸೇಯಂ ನತಿಶ್ಶಂಭವೇ ||

ವಾರ್ಧಿಕ ಷಟ್ಪದಿ

ಹರಿಯು ಕೈಪೆಟ್ಟಿಸಿಂ ಪೊಣ್ಮುವ ಮೃದಂಗರವ-
ಮುರು ಮೇಘಗರ್ಜನೆಯ ತೆರನೊಪ್ಪೆ, ಬಳಸಿರ್ದ
ಸುರಗಣದ ಕಣ್ಬೊಳಪೆ ಕೋಲ್ಮಿಂಚೆನಿಸೆ ಭಕ್ತರಾನಂದ ಬಾಷ್ಪತತಿ
ಸುರಿವ ಸರಿಯಾಗೆ, ಪಾರ್ವತಿಯೆಂಬ ಪೆಣ್ನವಿಲ್
ನೆರಸಿ ಬೇಸಗೆಯಂತ್ಯದಂತೆಸೆವ ಸಂಧ್ಯೆಯೊಳ್
ಮೆರೆವುದಾವನ ದಿವ್ಯತಾಂಡವಂ ಭಜಿಪೆನಾ ನೀಲಕಂಠನನಳ್ಕರಿಂ

ವಾರ್ಧಿಕ ಷಟ್ಪದಿ

ಆದ್ಯಂಗಗಣ್ಯತೇಜೋನಿಧಿಗೆ ನಿಗಮವಾ-
ಗ್ವೇದ್ಯಂಗೆ ಸಂತತಂ ಮೂಲೋಕಮಂ ರಕ್ಷಿ-
ಪುದ್ಯೋಗದೊಳ್ ತೊಡಗಿದಂಗೆ, ಸುರನಿಕರಗೇಯಂಗೆ ಮಾಯಾ
ಸದ್ಯೋಗಿ ಸಂಕುಲಧ್ಯೇಯಂಗೆ ಸದ್ಭಕ್ತ
ಸಾಧ್ಯಂಗೆ ಸಚ್ಚಿದಾನಂದರೂಪಂಗೆ ನಿರ-
ವದ್ಯತಾಂಡವ ಸಂಭ್ರಮಂಗೆ ನಮಿಸೆಂ ಜಟಾಜೂಟಂಗೆ ಶ್ರೀಶಂಭು

### ಶಾರ್ದೂಲ ವಿಕ್ರೀಡಿತ

ನಿತ್ಯಾಯ ತ್ರಿಗುಣಾತ್ಮನೇ ಪುರಜಿತೇ ಕಾತ್ಯಾಯನೀ ಶ್ರೇಯಸೇ ।
ತ್ಯಯಾದಿಕುಟುಂಬಿನೇ ಮುನಿಮನಃ ಪ್ರತ್ಯಕ್ಷ ಚಿನ್ಮೂರ್ತಯೇ ॥
ಯಾಸೃಷ್ಟ ಜಗತ್ತ್ರಯಾಯ ಸಕಲಾಮ್ನಾಯಾಂತ ಸಂಚಾರಿಣೇ ।
ಯಂ ತಾಂಡವ ಸಂಭ್ರಮಾಯ ಜಟಿನೇ ಸೇಯಂ ನತಿಶ್ಶಂಭವೇ ॥ ೫೭ ॥

### ಶಾರ್ದೂಲ ವಿಕ್ರೀಡಿತ

ನಿತ್ಯಂ ಸ್ವೋದರ ಪೋಷಣಾಯ ಸಕಲಾನುದ್ದಿಶ್ಯ ವಿತ್ತಾಶಯಾ ।
ರ್ಥಂ ಪ್ರರ್ಯಟನಂ ಕರೋಮಿ ಭವತಸ್ಸೇವಾಂ ನ ಜಾನೇ ವಿಭೋ ॥
ಸ್ಮನ್ಮಾಂತರ ಪುಣ್ಯಪಾಕ ಬಲತಸ್ತ್ವಂ ಶರ್ವ ಸರ್ವಾಂತರ
ಸ್ಯೈವ ಹಿ ತೇನ ವಾ ಪಶುಪತೇ ಸಂರಕ್ಷಣೀಯೋಽಸ್ಮ್ಯಹಮ್ ॥ ೫೭ ॥

### ವಾರ್ಧಿಕ ಷಟ್ಪದಿ

ನಿತ್ಯಂಗೆ ತ್ರಿಗುಣಾತ್ಮಕಂಗೆ ತ್ರಿಪುರಹರಂಗೆ
ತ್ಯಾಯನೀವಲ್ಲಭಂಗೆ ಮುನಿಗಳ ಮನಕೆ
ತ್ಯಕ್ಷವಾಗುತಿಹ ಸುಜ್ಞಾನರೂಪಂಗೆ ಸಾಂಬಗಾದಿ ಕುಟುಂಬಿಗೆ ॥
ಂಗೆ ಮಾಯೆಯಿಂ ತ್ರಿಜಗಮಂ ಪೆತ್ತಂಗೆ,
ಯಂತಗಳೊಳು ಸಂಚರಿಪಂಗೆ ಶಂಭುವಿಂ-
ತಭಕ್ತಿಯಿಂ ಮೊಳ್ಗುವೆಂ ಸಂಧ್ಯಾನಟನ ಸಂಭ್ರಮಂಗೆ ಜಟಿಗೆ ॥ ೫೭ ॥

### ಮತ್ತೇಭ ವಿಕ್ರೀಡಿತ

ಪೊರೆಯಲ್ಕಾಂ ಪೊಡೆಯಂ ಸದಾ ಸಕಲರಂ ದ್ರವ್ಯಾಶೆಯಿಂ ಸೇವಿಸು-
ತಿರ್ಪೆಂ! ಶಿವ ನಿನ್ನ ಸೇವೆಯನೆನಿತ್ತುಂ ಗೆಯ್ವುದಿಲ್ಲಾದೊಡೆ-
ರು ಜನ್ಮಾಂತರ ಪುಣ್ಯಪಾಕ ಬಲದಿಂದಾ ಸರ್ವರೊಳ್ ನೀನಿರು-
ತೆಕ್ಸೇವೆಯೆ ನಿನ್ನದಾದುದದರಿಂದಾಂ ರಕ್ಷಣೀಯಂ! ದಿಟಂ ॥ ೫೭ ॥

ಶಾರ್ದೂಲ ವಿಕ್ರೀಡಿತ

ಏಕೋ ವಾರಿಜ ಬಾಂಧವಃ ಕ್ಷಿತಿನಭೋವ್ಯಾಪ್ತಂ ತಮೋಮಂ
ಭಿತ್ವಾ ಲೋಚನ ಗೋಚರೋಽಪಿ ಭವತಿ ತ್ವಂ ಕೋಟಿ ಸೂರ್ಯಪ್ರಭಃ
ವೇದ್ಯಃ ಕಿಂ ನ ಭವಸ್ಯಹೋ ಘನತರಂ ಕೀದೃಗ್ಭವೇನ್ಮತ್ತಮಃ ।
ತತ್ಸರ್ವಂ ವ್ಯಪನೀಯ ಮೇ ಪಶುಪತೇ ಸಾಕ್ಷಾತ್ಪ್ರಸನ್ನೋಭವ ॥

ಶಾರ್ದೂಲ ವಿಕ್ರೀಡಿತ

ಹಂಸಃ ಪದ್ಮವನಂ ಸಮಿಚ್ಛತಿ ಯಥಾ ನೀಲಾಂಬುದಂ ಚಾತ
ಕೋಕಃ ಕೋಕನದಪ್ರಿಯಂ ಪ್ರತಿದಿನಂ ಚಂದ್ರಂ ಚಕೋರಸ್ತಥಾ ॥
ಚೇತೋ ವಾಂಛತಿ ಮಾಮಕಂ ಪಶುಪತೇ ಚಿನ್ಮಾರ್ಗಮೃಗ್ಯಂ ವಿಭೋ
ಗೌರೀನಾಥ ಭವತ್ಪದಾಬ್ಜಯುಗಳಂ ಕೈವಲ್ಯ ಸೌಖ್ಯಪ್ರದವ್ ॥

ಮತ್ತೇಭ ವಿಕ್ರೀಡಿತ ವೃತ್ತ

ಜಗಮಂ ಮುಚ್ಚಿದ ಮರ್ಬುನೋರ್ವ್ವ ರವಿಯೇ ವಿಧ್ವಂಸನಂಗೆಯ
ಮುಗೆ ಕಾಂಬಂ ! ರವಿಕೋಟಿ ತೇಜನೆನಿಸಿರ್ದ್ದಂ ನೀನದೇಕೆನ್ನ ದೃ- ॥
ಷ್ಟಿಗೆ ಹಾ ! ಕಾಣಿಸದಿರ್ಪೆ ! ಎಂತುಟೊ ? ಮದಜ್ಞಾನಾಂಧಕಾರಂ ಘ
ತೆಗೆದೆನ್ನಾತಮಮೆಲ್ಲಮಂ ಪಶುಪತೀ ಪ್ರತ್ಯಕ್ಷನಾಗೊಲ್ದು ನೀಂ ॥

ವಾರ್ಧಿಕ ಷಟ್ಪದಿ

ಅಂಬುಜಾಕರಮನೆಂತಿಚ್ಛಿಸುವುದಂಚೆ ನೀ-
ಲಾಂಬುದವ ಚಾತಕಂ, ದಿನಕರನನೆಸೆವಕ್ಕಿ,
ಅಂಬುಜಾರಿಯನಕ್ಕರಿಂದನುದಿನಂ ಚಕೋರಂ ಬಯಸುದೆಂತುಟಂತೆ
ಹಂಬಲಿಸುದೆನ್ನ ಮನಮಿದು ಜ್ಞಾನಮಾರ್ಗದಿಂ
ಕಾಂಬ ಮೇಣ್ ಮೋಕ್ಷಸುಖಮಂ ಕೊಡುವ ನಿನ್ನ ಪಾ-
ದಾಂಬುರುಹಯುಗಳಮಂ ಸಂತತಂ ಪಶುಪತಿಯೆ ! ಗೌರೀಶ ! ಕರು

ಶಾರ್ದೂಲ ವಿಕ್ರೀಡಿತ

ಕೋಧಸ್ತ್ರೋಯಹೃತಶ್ಚ ಮೇಶ್ ಪಥಿಕಶ್ಛಾಯಾಂ ತರೋರ್ವೃಷ್ಟಿತೋಃ ।
ಸ್ವಸ್ಥಗೃಹಂ ಗೃಹಸ್ಥಮತಿಥಿರ್ದೀನಃ ಪ್ರಭುಂ ಧಾರ್ಮಿಕಮ್ ॥
ಂ ಸಂತಮಸಾಕುಲಶ್ಚ ಶಿಖಿನಂ ಶೀತಾವೃತಸ್ತ್ವಂ ತಥಾ ।
ಸ್ಸರ್ವಭಯಾಪಹಂ ವ್ರಜ ಸುಖಂ ಶಂಭೋಃ ಪದಾಂಭೋರು-
ಹಮ್ ॥೬೦॥

ಶಾರ್ದೂಲ ವಿಕ್ರೀಡಿತ

ಅಂಕೋಲಂ ನಿಜಬೀಜಸಂತತಿರಯಸ್ಕಾಂತೋಪಲಂ ಸೂಚಿಕಾ ।
ಷ್ವೀ ನೈಜವಿಭುಂ ಲತಾ ಕ್ಷಿತಿರುಹಂ ಸಿಂಧುಸ್ಸರಿದ್ವಲ್ಲಭಂ ॥
ಪ್ನೋತೀಹ ಯಥಾ ತಥಾ ಪಶುಪತೇಃ ಪಾದಾರವಿಂದದ್ವಯಂ ।
ೋವೃತ್ತಿರುಪೇತ್ಯ ತಿಷ್ಠತಿ ಸದಾ ಸಾ ಭಕ್ತಿರಿತ್ಯುಚ್ಯತೇ ॥ ॥೬೧॥

ವಾರ್ಧಿಕ ಷಟ್ಪದಿ

ಮಳೆಗಂಜಿದಂ ಭದ್ರನಿಳಯಮಂ, ಜಲದೊಳುರು-
ುವಂ ತೀರಮಂ, ದಣಿದ ಪಥಿಕಂ ಮರದ
ನತಿಥಿ ಗೃಹಸ್ಥನಂ, ಬಳಲ್ವಬಡವನಾ ಧರ್ಮಾತ್ಮನಾದ ಪ್ರಭುಮಂ ॥
ುಡಿದನಗ್ನಿಯಂ, ಸಾಂದ್ರತಮದಿಂದ ವ್ಯಾ-
ಸಾದವಂ ಸೊಡರನೊಂದಿ ಪದುಳಿಪವೋಲ್ ನಿ-
ಭಯಂಗಳೆವ ಶಂಭುಪದಾಬ್ಜಮಂ ಪೊಂದಿ ನಿಜಸುಖಂಬಾಳು-
ಮನವೇ ॥೬೦॥

ವಾರ್ಧಿಕ ಷಟ್ಪದಿ

ತಿರೆಯೊಳಂಕೋಲಮನದರ ಬೀಜಸಂಕುಳಂ,
ಂದೆ ಸೂಜಿಗಲ್ಲಂ ಸೂಜಿ ಕೂರ್ಮೆಯಿಂ
ನಿಜಕಾಂತನಂ ಬಳ್ಳಿ ಭೂರುಹಮಂ, ಮಹಾನದಿ ಪಯೋನಿಧಿಯನು
ಪೊಂದುತಿಹವೆಂತುಟಂತೆ ಮಾನಸವೃತ್ತಿ
ವನ ಪಾದಾರವಿಂದದ್ವಯಮನೊಂದಿ
ತಮದರೊಳೆ ನೆಲಸಿರುತ್ತಿರ್ದೊಡದೆ ಜಗದೆ ಸದ್ಭಕ್ತಿಯೆಂದೆನಿಪ್ಪುದು ॥೬೧॥

ಶಾರ್ದೂಲ ವಿಕ್ರೀಡಿತ

ಆನಂದಾಶ್ರುಭಿರಾತನೋತಿಪುಳಕಂ ನೈರ್ಮಲ್ಯತಶ್ಛಾದನಂ ।
ವಾಚಾಶಂಖಮುಖೇ ಸ್ಥಿತೈಶ್ಚ ಜಠರಾಪೂರ್ತಿಂ ಚರಿತ್ರಾಮೃತೈಃ ॥
ರುದ್ರಾಕ್ಷೈರ್ಭಸಿತೇನ ದೇವ ವಪುಷೋ ರಕ್ಷಾಂ ಭವದ್ಭಾವನಾ ।
ಪರ್ಯಂಕೇ ವಿನಿವೇಶ್ಯ ಭಕ್ತಿಜನನೀ ಭಕ್ತಾರ್ಭಕಂ ರಕ್ಷತಿ ॥೬೨॥

ಶಾರ್ದೂಲ ವಿಕ್ರೀಡಿತ

ಮಾರ್ಗಾವರ್ತಿತಪಾದುಕಾ ಪಶುಪತೇರಂಗಸ್ಯ ಕೂರ್ಚಾಯ
ಗಂಡೂಷಾಂಬು ನಿಷೇಚನಂ ಪುರರಿಪೋರ್ದಿವ್ಯಾಭಿಷೇಕಾಯತೇ ॥
ಕಿಂಚಿದ್ಭಕ್ಷಿತ ಮಾಂಸ ಶೇಷಕಬಳಂ ನವ್ಯೋಪಹಾರಾಯತೇ ।
ಭಕ್ತಿಃ ಕಿಂ ನ ಕರೋತ್ಯಹೋ ವನಚರೋ ಭಕ್ತಾವತಂಸಾಯತೇ

ವಾರ್ಧಿಕ ಷಟ್ಪದಿ

ಪುಟ್ಟಿಸುವಳಾನಂದಬಾಷ್ಪದಿಂ ಪುಳಕಮಂ
ಬಟ್ಟೆಯಂ ಪೊದಿಸುವಳ್ ನಿರ್ಮಳತೆಯೆಂಬುದಂ,
ಪ್ರೊಟ್ಟೆದುಂಬೂಡುವಳ್ ನುಡಿಯೆಂಬ ಶಂಖದಿಂ ನಿನ್ನ ಚರಿತಾಮೃತ
ಇಟ್ಟು ಭಸಿತ ಶಿವಾಕ್ಷಿಗಳಿನಂಗರಕ್ಷೆಯಂ
ಪಟ್ಟಿರಿಸಿ ಶಿವ ತವ ಧ್ಯಾನಪರ್ಯಂಕದೊಳ್
ಕಟ್ಟಳ್ಕರಿಂ ಪೊರೆದಪಳ್ ಭಕ್ತಿಮಾತೆ ! ಸದ್ಭಕ್ತನೆಂಬರ್ಭಕನನು ॥

ವಾರ್ಧಿಕ ಷಟ್ಪದಿ

ಹಾದಿಯಂ ತುಳಿತುಳಿದು ಸವೆದಿರ್ದಕೆರವು ಕಾ-
ನಾದತ್ತು ಪಶುಪತಿಗೆ ಮೈಯ್ಯನೊರಸುವ ಕುಂಚ-
ಮಾದಪದಿ ಬಾಯೊಳಾಂತುಗುಳ್ದನೀರ್ ಪುರಹರಗೆ ದಿವ್ಯಾಭಿಷೇಕ
ಸ್ನಾನಮುಂ ನೋಡಲೆಂಜಲಿಸಿರ್ದ ಮಾಂಸಂ ವಿ
ಷಾದನಂಗತಿದಿವ್ಯರುಚಿಯ ಶುಚಿಮೃಷ್ಟಾನ್ನ-
ಮಾದುದಾ ವನಚರಂ ಭಕ್ತವರನಾದನುಮಾ ! ಭಕ್ತಿಯೇಗೆ-
ಯ್ಯದೋ

ಶಾರ್ದೂಲ ವಿಕ್ರೀಡಿತ

ವಕ್ಷಸ್ತಾಡನಮಂತಕಸ್ಯ ಕಠಿಣಾಪಸ್ಮಾರಸಂಮರ್ದನಂ |
ೃತ್ಪರ್ಯಟನಂ ನಮತ್ಸುರಶಿರಃ ಕೋಟೀರ ಸಂಘರ್ಷಣಂ ||
ನಂ ಮೃದುಳಸ್ಯ ತಾವಕಪದದ್ವಂದ್ವಸ್ಯ ಗೌರೀಪತೇ |
ೀತೋಮಣಿಪಾದುಕಾ ವಿಹರಣಂ ಶಂಭೋಃ ಸದಾಂಗೀಕುರು ||೬೪||

ಶಾರ್ದೂಲ ವಿಕ್ರೀಡಿತ

ವಕ್ಷಸ್ತಾಡನ ಶಂಕಯಾ ವಿಚಲಿತೋ ವೈವಸ್ವತೋ ನಿರ್ಜರಾಃ|
ಟೀರೋಜ್ಜ್ವಲರತ್ನದೀಪಕಲಿಕಾ ನೀರಾಜನಂ ಕುರ್ವತೇ ||
ಷ್ಟ್ವಾ ಮುಕ್ತಿವಧೂಸ್ತನೋತಿ ನಿಭೃತಾಶ್ಲೇಷಂ ಭವಾನೀಪತೇ |
ೀತಸ್ತವ ಪಾದಪದ್ಮಭಜನಂ ತಸ್ಯೇಹ ಕಿಂ ದುರ್ಲಭಂ ||೬೫||

ವಾರ್ಧಿಕ ಷಟ್ಪದಿ

ಒದೆದು ಯಮನೆದೆಗಪಸ್ಮಾರನಂ ತೊತ್ತಳದು-
ಪರ್ವತದೊಳು ಭ್ರಮಣಂಗೆಯ್ದು, ಕುಂಬಿಡುವ
ಸಂದಣಿಯ ರತ್ನಕಿರೀಟಚಯದ ಸಂಘರ್ಷಣವ ಪೊಂದಿ ಪೊಂದಿ ||
ುವಾದ ನಿನ್ನ ಪಾದದ್ವಯಂ ನೋವುದಾ-
ಂದೆ ದೇವ, ಗೌರೀನಾಥ ! ನೀನೆನ್ನ
ಲ ಮನಸ್ಸೆಂಬ ರನ್ನವಾವುಗೆಯುನನಿಶಂ ಮೆಟ್ಟಿ ಸಂಚರಿಸೆಲೈ ||೬೪||

ವಾರ್ಧಿಕ ಷಟ್ಪದಿ

ಎದೆಗೊಡೆತಮಪ್ಪ ಸಂದೇಹದಿಂ ಸಸಿಹಕ್ಕೆ
ಪಲಾಯನಗೆಯ್ವನಂತಕಂ ಹರುಷದಿಂ
ರಾರತಿ ಬೆಳಗುವರ್ ಕಿರೀಟಂಗಳುಜ್ವಲರತ್ನದೀಪಿಕೆಗಳಿಂ ||
ಮರ್ದಪ್ಪಿಕೊಳ್ವಳ್ ಮುಕ್ತಿವಧು ನೋಡಿ
ನಹರ ! ನಿನ್ನಪಾದಾಂಬುಜದ ಭಜನೆಯಂ
ಸಮೊಳ್ ಭಕ್ತಿಯಿಂ ಸಂತತಂ ಮಾಳ್ಪಂಗೆ ದುರ್ಲಭಮದಾವುದಿಹದೊಳ್
||೬೫||

ಶಾರ್ದೂಲ ವಿಕ್ರೀಡಿತ

ಕ್ರೀಡಾರ್ಥಂ ಸೃಜಸಿ ಪ್ರಪಂಚಮಖಿಲಂ ಕ್ರೀಡಾಮೃಗಾಸ್ತೇ
ಯತ್ಕರ್ಮಾಚರಿತಂ ಮಯಾ ಚ ಭವತಃಪ್ರೀತ್ಯೈ ಭವತ್ಯೇವ ತತ್ ||
ಶಂಭೋ ಸ್ವಸ್ಯ ಕುತೂಹಲಸ್ಯ ಕರಣಂ ಮಚ್ಚೇಷ್ಟಿತಂ ನಿಶ್ಚಿತಂ|
ತಸ್ಮಾನ್ಮಾಮಕರಕ್ಷಣಂ ಪಶುಪತೇ ಕರ್ತವ್ಯಮೇವ ತ್ವಯಾ ||೬೬||

ಪುಷ್ಪಿತಾಗ್ರಾ ವೃತ್ತ

ಬಹು ವಿಧ ಪರಿತೋಷಬಾಷ್ಪಪೂರ
ಸ್ಫುಟಪುಲಕಾಂಕಿತ ಚಾರುಭೋಗಭೂಮಿಂ ||
ಚಿರಪದಫಲಕಾಂಕ್ಷಿಸೇವ್ಯಮಾನಾಂ |
ಪರಮ ಸದಾಶಿವ ಭಾವನಾಂ ಪ್ರಪದ್ಯೆ

ಮತ್ತೇಭ ವಿಕ್ರೀಡಿತ ವೃತ್ತ

ಜಗಮಂ ಪುಟ್ಟಿಪೆ ಲೀಲೆಗಾಗಿ ! ಜನರೆಲ್ಲರ್ ಸಾಂಬ ನಿನ್ನಾಟ
ಮಿಗಗಳ್ ನನ್ನಿನದಾವುದಪ್ಪುದದು ತಾಂ ನಿನ್ನಕ್ಕರಕ್ಕಪ್ಪುದೈ- ||
ಮೊಗ ! ನಿನ್ನಿಚ್ಛೆಯ ಕಾರ್ಯಮೆನ್ನ ನಡೆತಂ ತಾನಂತರಿಂದೆನ್ನ ನೀಂ |
ಮಿಗೆ ಸಂರಕ್ಷಣಗೆಯ್ಯಲೈ ನಿನಗಿದೇ ಕರ್ತವ್ಯಮಾಗಿರ್ಪುದು ! ||೬೭||

ಭಾಮಿನಿ ಷಟ್ಪದಿ

ಪಲಬಗೆಯ ಸಂತೋಷ ಬಾಷ್ಪಂ-
ಗಳ ಪೊನಲ್ಗಳುಮುಣ್ಮಿವಾ ಪೊಂ-
ಪುಳಿಗಳುಂ ಕುರುಹಾಗಿ ಮೆರೆವಾನಂದ ಬುವಿಯೆನಿಸಿ ||
ಸಲೆ ಮುಮುಕ್ಷು ಜನರ್ಗೆ ಚಿರಪದ
ಫಲವನೊಲವಿಂದೀಯುತಿಹ ನಿ-
ರ್ಮಲತರ ಶಿವಧ್ಯಾನಮಂ ನೊರೆವೊಗುವೆನನವರತ

## ಪುಷ್ಪಿತಾಗ್ರಾ ವೃತ್ತ

ಅಪಿತ ಮುದಮೃತಂ ಮುಹುರ್ದುಹಂತೀಂ |
ಲ ಭವತ್ಪದಗೋಷ್ಠಮಾವಸಂತೀಂ ||
ಮ ಪಶುಪತೇ ಶುಭಪುಣ್ಯಪಾಕಾಂ |
ಂ ಪರಿಪಾಲಯ ಭಕ್ತಿಧೇನುಮೇಕಾಂ ||೬೮||

## ಆರ್ಯಾವೃತ್ತ

ಜಡತಾ ಕಳಂಕಿತಾ ವಾ
ಲ ಚರತ್ವಂ ಚ ನಾಸ್ತಿ ಮಯಿ ದೇವ ||
ಯದಿ ರಾಜಮೌಳೇ
ಾಭರಣಸ್ಯ ನಾಸ್ತಿ ಕಿಂ ಪಾತ್ರಂ . || ೬೯ ||

## ಚಂಪಕ ಮಾಲಾ ವೃತ್ತ

ಕರೆವುದು ಪೊಳ್ತು ಪೊಳ್ತಿಗೆ ಸುಖಾಮೃತಮಂ ಮಿತಿಯಿಲ್ಲದಂದದಿಂ !
ದಿಹುದೆನ್ನ ಪೂರ್ವಸುಕೃತಾಧಿಕದಿಂದಮಿದೊಂದು ! ನಿನ್ನ ಸತ್ ||
ಚರ ನಿರ್ಮಲಾಂಘ್ರಿಯೆನಿಪುತ್ತಮ ಗೋಷ್ಠದೊಳಿರ್ಪುದೀಗಳುಂ |
ುದಯಾಳುವೇ ! ಪಶುಪತೀ ! ಸಲಹೆನ್ನಯ ಭಕ್ತಿಧೇನುವಂ ||೭೦||

## ಕಂದ

ಇಲ್ಲಂ ವಕ್ರಚರಿತ ಮೆ- |
ಜಡತ್ವಂ ಕಳಂಕಮುಂ ಜಗದೀಶಾ! ||
ಡಿವ್ರ ಪಾತ್ರನೇಕಾ-
ುಸಿರ್ ನಿನ್ನ ತೊಡವಿಗಾಂ ಶಶಿಮೌಳೀ ! || ೭೧ ||

### ಪುಷ್ಪಿತಾಗ್ರಾ ವೃತ್ತ

ಅರಹಸಿ ರಹಸಿ ಸ್ವತಂತ್ರಬುದ್ಧ್ಯಾ
ಪರಿವಸಿತುಂ ಸುಲಭಃ ಪ್ರಸನ್ನಮೂರ್ತಿಃ ||
ಅಗಣಿತ ಫಲದಾಯಕಃ ಪ್ರಭುರ್ಮೇ
ಜಗದಧಿಕೋ ಹೃದಿ ರಾಜಶೇಖರೋಽಸ್ತಿ || ೭೦ ||

### ವಸಂತತಿಲಕ ವೃತ್ತ

ಆರೂಢ ಭಕ್ತಿಗುಣಕುಂಚಿತ ಭಾವಚಾಪ
ಯುಕ್ತೈಸ್ಮೃತಿವಸ್ಮರಣಬಾಣಗಣೈರಮೋಘೈಃ ||
ನಿರ್ಜಿತ್ಯ ಕಿಲ್ಬಿಷರಿಪೂನ್ ವಿಜಯೀ ಸುಧೀಂದ್ರ
ಸ್ವಾನಂದಮಾವಹತಿ ಸುಸ್ಥಿರ ರಾಜ್ಯಲಕ್ಷ್ಮೀಂ ||೭೧||

### ಚಂಪಕಮಾಲಾ ವೃತ್ತ

ಬಗೆಗನುಕೂಲಮಪ್ಪ ತೆರದಿಂ ಬಹಿರಂಗದೊಳಂತರಂಗದೊಳ್
ಮಿಗೆ ಪರಿಸೇವಿಸಲ್ಕೆ ಸುಲಭಂ ಕಳೆವೆತ್ತ ಪ್ರಸನ್ನಮೂರ್ತಿ ತಾಂ ||
ಅಗಣಿತ ಸತ್ಫಲಂಗುಡುವ ಮತ್ಪ್ರಭುವಿರ್ದಪನೆನ್ನ ಚಿತ್ತದೊಳ್ |
ಜಗದಧಿಕಂ! ಕೃಪಾಭರಿತನಾಗಿ ವಿರಾಜಿಪ ರಾಜಶೇಖರಂ! || ೭೦

### ಚಂಪಕಮಾಲಾ ವೃತ್ತ

ಅನುಪಮ ಭಕ್ತಿಯೆಂಬ ಹೆದೆಯೇರಿಸೆ ಬಾಗಿದ ಚಿತ್ತಮೆಂಬ ಬಿ-
ಲ್ಲಿನೊಳಮರ್ದೀಶ ಸಂಸ್ಮರಣೆಯೆಂಬ ನಿಶಾತಶರೌಘದಿಂದೆ ಪಾ-
ಪ ನಿಚಯಮೆಂಬ ಶತ್ರುಗಳನೆಚ್ಚು ಜಯಾನ್ವಿತನಾದ ಜ್ಞಾನಿ ತಾ-
ನನುಭವಿಸುಂ ಕಣಾ! ನಿಜಸುಖಾತ್ಮಕ ಸುಸ್ಥಿರ ರಾಜ್ಯಲಕ್ಷ್ಮಿಯಂ ||೭

### ವಸಂತತಿಲಕ ವೃತ್ತ

ಧ್ಯಾನಾಂಜನೇನ ಸಮವೇಕ್ಷ್ಯ ತಮಃಪ್ರದೇಶಂ
ಮಹಾಬಲಿಭಿರೀಶ್ವರನಾಮಮಂತ್ರೈಃ
ಶ್ರಿತಂ ಭುಜಗಭೂಷಣಮುದ್ವಹಂತಿ
ಪಾದಪದ್ಮಮಿಹ ತೇ ಶಿವ ತೇ ಕೃತಾರ್ಥಾಃ ||೭೨||

### ವಸಂತತಿಲಕ ವೃತ್ತ

ಭೂದಾರತಾ ಮುದ ವಹದ್ಯದಪೇಕ್ಷಯಾ ಶ್ರೀ
ದಾರ ಏವ ಕಿಮುತಸ್ಸುಮತೇ ಲಭಸ್ವ ||
ರ ಮಾಕಲಿತ ಮುಕ್ತಿ ಮಹೌಷಧೀನಾಂ
ರಪಿಂಪ ಭಜನಂ ಪರಮೇಶ್ವರಸ್ಯ ||೭೩||

### ಮತ್ತೇಭ ವಿಕ್ರೀಡಿತ ವೃತ್ತ

ನಲೆ ಧ್ಯಾನಾಂಜನದಿಂ ನಿರೀಕ್ಷಿಸುತಗುಳ್ದಜ್ಞಾನಮೆಂದೆಂಬ ಕ-
ದೀವಿರ್ದೆಡೆಯಂ ಮಹಾಬಲಿಗಳಿಂ ತ್ವನ್ನಾಮಮಂತ್ರಂಗಳಿಂ ||
ವದ್ದೇವಸಮಾಶ್ರಿತಂ ಭುಜಗಭೂಷಂ ನಿತ್ಯಮಾಗಿರ್ಪ ತ್ವ-
ತ್ಪಾದಪಯೋಜಮೆಂಬ ನಿಧಿಯಂ ಕೊಳ್ವರ್ ಕೃತಾರ್ಥರ್ ! ಶಿವಾ ||೭೪||

### ಉತ್ಪಲಮಾಲಾ ವೃತ್ತ

ಶ್ರೀವರನಾಗಿ ಭೂರಮಣನಾಗಿ ವಿರಾಜಿಪ ವಿಷ್ಣುವುಂ ಸಮಂ |
ಪುದರಾಶಿಯಿಂ ತಳೆದನೋ ನಲವಿಂದೆ ವರಾಹ ರೂಪಮಂ ||
ದು ಮುಕ್ತಿಸಸ್ಯಗಳಿಗುತ್ತಪ್ರೊಲಂ ವಲಮಾದುದಾ ಮಹಾ- |
ವ ಪದಾಬ್ಜಸೇವೆಯನೆ ನೀಂ ಪಡೆಯೈ! ಸುಮತೀ ನಿರಂತರಂ ||೭೫||

ಶಾಲಿನೀ ವೃತ್ತ

ಆಶಾ ಪಾಶ ಕ್ಲೇಶ ದುರ್ವಾಸನಾದೇಃ
ಭೇದೋದ್ಯುಕ್ತೈರ್ದಿವ್ಯ ಗಂಧೈರಮಂದೈಃ
ಆಶಾಶಾಟೀಕಸ್ಯ ಪಾದಾರವಿಂದಂ
ಚೇತಃ ಪೇಟೀಂ ವಾಸಿತಾಂ ಮೇ ತನೋತು ||೭೪||

ವಸಂತ ತಿಲಕ ವೃತ್ತ

ಕಲ್ಯಾಣಿನಂ ಸರಸಚಿತ್ರಗತಿಂ ಸವೇಗಂ
ಸರ್ವೇಂಗಿತಜ್ಞಮನಘಂ ಧ್ರುವಲಕ್ಷಣಾಢ್ಯಂ ||
ಚೇತಸ್ತುರಂಗಮಧಿರುಹ್ಯ ಚರ ಸ್ಮರಾರೇ
ನೇತಸ್ಸಮಸ್ತಜಗತಾಂ ವೃಷಭಾಧಿರೂಢ ||೭೫||

ಪರಿವರ್ಧಿನೀ ಷಟ್ಪದಿ

ಆಶಾ ಪಾಶ ಕ್ಲೇಶಗಳಂ ದು-
ರ್ವಾಸನೆ ಮೊದಲಾದೆಲ್ಲ ಮಲಿನಮಂ
ನಾಶಂಗೆಯ್ಯುವ ದಿವ್ಯತರದ ನಿಜ ಸದ್ಗಂಧಗಳಿಂದ ||
ಆಶಾಚೇಲನ ಪಾದಾಬ್ಜಂ ಸ-
ದ್ವಾಸನೆಗೊಳಿಸುಗೆ ತಾನಿದನನಿಶಂ
ವಾಸಂಗೆಯ್ದೆನ್ನ ಬಗೆವೆಟ್ಟಿಗೆಯೊಳ್ ನಾಂ ಬೇಳ್ಪೆನಿದಂ ||೭೬||

ಮತ್ತೇಭ ವಿಕ್ರೀಡಿತ ವೃತ್ತ

ಅಕಲಂಕಂ ರಮಣೀಯ ಚಿತ್ರಗಮನಂ ಕಲ್ಯಾಣಿ ವೇಗಾನ್ವಿತಂ
ಪ್ರಕಟೋದ್ಯದ್ಧ್ರುವ ಲಕ್ಷಣಾವಳಿಯುತಂ ಸರ್ವೇಂಗಿತಜ್ಞಂ ಸುಕೌ- |
ತುಕದಂ ನನ್ನ ಮನಸ್ತುರಂಗಮಮಿದಂ ಮಾರಾರಿ ಲೋಕೈಕನಾ- |
ಯಕ ! ನೀನೇರಿ ವಿಹಾರಗೆಯ್ ! ಅನುದಿನಂ ಶೀಘ್ರಂ ವೃಷಾರೂಢನೇ

ವಸಂತ ತಿಲಕ ವೃತ್ತ

ಭಕ್ತಿರ್ಮಹೇಶಪದಪುಷ್ಕರಮಾವಸಂತೀ
ಬಿನೀವ ಕುರುತೇ ಪರಿತೋಷವರ್ಷಂ ||
ರಿತೋ ಭವತಿ ಯಸ್ಯ ಮನಸ್ತಟಾಕ
ಸ್ಮಸಸ್ಯಮಖಿಲಂ ಸಫಲಂ ಚ ನಾನ್ಯತ್ ||೭೬||

ವಸಂತತಿಲಕ ವೃತ್ತ

ಬುದ್ಧಿಸ್ಸ್ಥಿರಾಭವಿತುಮೀಶ್ವರಪಾದಪದ್ಮ
ವಧೂರ್ವಿರಹಿಣೀವ ಸದಾ ಸ್ಮರಂತೀ ||
ವನಾ ಸ್ಮರಣ ದರ್ಶನ ಕೀರ್ತನಾದಿ
ಹಿತೇವ ಶಿವಮಂತ್ರಜಪೇನ ಖಿಂತೇ ||೭೭||

ಉತ್ಪಲಮಾಲಾ ವೃತ್ತ

ಸಾಂಬನದಿವ್ಯಪಾದಮೆನಿಪಂಬರದಲ್ಲಿಹ ಭಕ್ತಿಯೆಂಬ ಕಾ- |
ನಿಯಿಂ ನಿರಂತರದೆ ಬೀಳ್ವ ಲಸತ್ ಪರಿತೋಷವರ್ಷದಿಂ ||
ಬಿ ಮನಸ್ತಟಾಕವಿಹುದಾವನದಾತನ ಜನ್ಮಮೆಂಬ ಸ- |
ಬಿಡದೆಲ್ಲಮುಂ ಸಫಲಮಾದಪುದನ್ಯದರಿಂದಮಾಗದು ||೭೮||

ವಾರ್ಧಿಕ ಷಟ್ಪದಿ

ಪರಮೇಶ್ವರನ ಸದಾನಂದದಾಯಕ ಪದಾಂ-
ಹದೊಳಗಾಸಕ್ತಮಾಗಿರ್ಪ ಬುದ್ಧಿ, ಪತಿ-
ಹಮಂ ಪೊಂದಿರ್ದ ಸಾಧ್ವೀಮಣಿಯ ತೆರದೊಳಾವಗಮದನೆ ನೆನೆಯುತಂ||
ತಿಯುಂ ಪಡೆವುದಕೆ ಶಿವಮಂತ್ರಜಪದಿಂದೆ
ವಿಮೋಹಂಗೊಂಡತೆರದಿ ಸದ್ಭಾವನಾ-
ಣ ಕೀರ್ತನ-ದರ್ಶನಾದಿಗಳ ಬಗೆಗವಿರತಂ ವಿಚಾರಿಸುತಿರ್ಪುದು ||೭೯||

ದ್ರುತವಿಲಂಬಿತ ವೃತ್ತ

ಸದುಪಚಾರವಿಧಿಷ್ವನುಬೋಧಿತಾಂ
ಸವಿನಯಾಂ ಸುಹೃದಂ ಸಮುಪಾಶ್ರಿತಾಂ ||
ಮಮ ಸಮುದ್ಧರ ಬುದ್ಧಿಮಿಮಾಂ ಪ್ರಭೋ
ವರಗುಣೇನ ನವೋಢ ವಧೂಮಿವ ||೭೮||

ಶಾರ್ದೂಲ ವಿಕ್ರೀಡಿತ ವೃತ್ತ

ನಿತ್ಯಂ ಯೋಗಿ ಮನಸ್ಸರೋಜದಳ ಸಂಚಾರಕ್ಷಮಸ್ತ್ವತ್ಕ್ರಮ
ಶ್ಶಂಭೋ ತೇನ ಕಥಂ ಕಠೋರ ಯಮರಾಡ್ವಕ್ಷಃಕವಾಟಕ್ಷತಿಃ ||
ಅತ್ಯಂತಂ ಮೃದುಲಂ ತ್ವದಂಘ್ರಿಯುಗಳಂ ಹಾ ಮೇ ಮನಶ್ಚಿಂತಯ
ತ್ಯೇತಲ್ಲೋಚನಗೋಚರಂ ಕುರು ವಿಭೋ ಹಸ್ತೇನ ಸಂವಾಹಯೇ

ಚಂಪಕಮಾಲಾ ವೃತ್ತ

ಸವಿನಯಳಾಗಿ ಮೇಣ್ ಸುಹೃದುಪಾಶ್ರಿತಳಾಗಿ ಸದಾದರೋಪ-
ಚಾರವಿಧಿವಿಧಾನಮಂ ಕಲಿತು ವರ್ತಿಪಳಾಗಿರುವೆನ್ನ ಬುದ್ಧಿಯೆಂ-
ಬವಳನುದಾರ ಮಾನಸದೊಳುದ್ಧರಿಸೈ ! ಮನೆಯೊಳ್ ಪೊದಳ್ದ ಬಂ-
ದ ವಧುವನೆಂತುಟಂತೆ ವರಸದ್ಗುಣದಿಂ ಜಗದೀಶ ಶಂಕರಾ ||೭೮||

ವಾರ್ಧಿಕ ಷಟ್ಪದಿ

ನಿರುತಂ ಮುನಿ ಮನೋಂಬುಜದಳಂಗಳಲ್ಲಿ ಸಂ-
ಚರಿಸಲರ್ಹಪ್ಪುದಯ್ಯ ನಿನ್ನಡಿ! ಸುಧಾಸೂತಿ
ಧರನೆ! ನೀನದರಿಂದೊದೆಯಲೆಂತು ಕಠಿಣಯಮನೆದೆಯ ಬಾಗಿಲ್ಬಿರಿದುದೆ
ಕಿರುಕಿಸಲ್ ನಿನ್ನಂಘ್ರಿಯುಗ್ಮಮತ್ಯಂತ ಮೃದು-
ವಿರುತಿರ್ಪುದಕಟ! ಚಿಂತಿಪ್ಪುದಿದನೆ ಎನ್ನಬಗೆ!
ತ್ವರಿತದಿಂದದನೆನ್ನ ಕಣ್ಗೆ ಕಾಣಿಸು, ದೇವ! ಹಸ್ತಂಗಳಿಂದೊತ್ತುವೆಂ ||

ಶಾರ್ದೂಲ ವಿಕ್ರೀಡಿತ ವೃತ್ತ

ವಿಸ್ಮೃತ್ಯೈಷ ಜನಿಂ ಮನೋಸ್ಯ ಕಠಿನಂ ತಸ್ಮಿನ್ನಟಾನೀತಿ ಮ
ಯ್ಯೈ ಗಿರಿಸೀಮ್ನಿ ಕೋಮಲ ಪದನ್ಯಾಸಂ ಪುರಾಭ್ಯಾಸಿತಃ ||
ಚೇದ್ದಿವ್ಯಗೃಹಾಂತರೇಷು ಸುಮನಸ್ತಲ್ಪೇಷು ವೇದ್ಯಾದಿಷು
ಸ್ಸತ್ಸು ಶಿಲಾತಲೇಷು ನಟನಂ ಶಂಭೋ ಕಿಮರ್ಥಂ ತವ ||೮೦||

ಶಾರ್ದೂಲ ವಿಕ್ರೀಡಿತ ವೃತ್ತ

ಕಂಚಿತ್ಕಾಲಮುಮಾಮಹೇಶ ಭವತಃ ಪಾದಾರವಿಂದಾರ್ಚನೈಃ
ಧ್ಯಾನಸಮಾಧಿಭಿಶ್ಚ ನತಿಭಿಃ ಕಂಚಿತ್ಕಥಾ ಕರ್ಣನೈಃ
ಕಂಚಿದವೇಕ್ಷಣೈಶ್ಚ ನುತಿಭಿಃ ಕಂಚಿದ್ದಶಾ ಮೀದೃಶೀಂ
ಪ್ರಾಪ್ನೋತಿ ಮುದಾ ತ್ವದರ್ಪಿತಮನಾ ಜೀವನ್ ಸ ಮುಕ್ತಃ ಖಲು ||೮೧||

ಮತ್ತೇಭ ವಿಕ್ರೀಡಿತ

ಉದಿಪಂ ಮುಂದಿವನೀತನಶ್ಮಮನದೊಳ್ ನರ್ತಿಪ್ಪೆನೆಂದೆನ್ನ ನೋ-
ಗಳ್ ಗಿರಿಯಲ್ಲಿ ಮೆಲ್ಲಡಿಯನಿಟ್ಟಭ್ಯಾಸಮುಂ ಗೆಯ್ದೆ! ಆ- ||
ಡಾ ದಿವ್ಯಗೃಹಂಗಳುಂ ಜಗುಲಿಗಳ್ ಪೂವಾಸುಗಳ್ ತೀವಿರಲ್
ದಿಂ ಕಲ್ಗಳಮೇಲೆ ನೀಂ ಕುಣಿದುದೇಕೈ? ಪೇಳ್ ಮನೋಜಾಂತಕಾ ||೮೦||

ಮತ್ತೇಭ ವಿಕ್ರೀಡಿತ

ನಿನಗಾವಂ ಮನಮುಂ ಸಮರ್ಪಿಸಿ ಮಹೇಶಾ ನಿನ್ನ ಪಾದಾಂಬುಜಾ-
ದಿಂದೊರ್ಮೆ ಸ್ತವಂಗಳಿಂ ಕಥೆಗಳಿಂದೋರೋರ್ಮೆ ನಿನ್ನಂಘ್ರಿಮಂ-
ದೊರ್ಮೆ ಸಮೀಕ್ಷಣ ಸ್ಮರಣದಿಂದೊರೊರ್ಮೆ, ಈ ಮಾಳ್ಕೆಯಿಂ-
ಸಮ್ಮುದಮೊಂದುತಿರ್ಪನೊ ಜೀವನ್ಮುಕ್ತನಾತಂ! ದಿಟಂ ||೮೧||

### ಶಾರ್ದೂಲ ವಿಕ್ರೀಡಿತ ವೃತ್ತ

ಬಾಣತ್ವಂ ವೃಷಭತ್ವಮರ್ಧವಪುಷಾ ಭಾರ್ಯಾತ್ವಮಾರ್ಯಾಪತೇ।
ಘೋಣಿತ್ವಂ ಸಖಿತಾ ಮೃದಂಗವಹತಾ ಚೇತ್ಯಾದಿ ರೂಪಂದಧೌ ॥
ತ್ವತ್ಪಾದೇ ನಯನಾರ್ಪಣಂ ಚ ಕೃತವಾನ್ ತ್ವದ್ದೇಹ ಭಾಗೋಹರಿಃ।
ಪೂಜ್ಯಾತ್ ಪೂಜ್ಯತರಸ್ಸ ಏವ ಹಿ ನ ಚೇತ್ಕೋವಾ ತದನ್ಯೋಽಧಿಕಃ

### ಮಾಲಿನೀ ವೃತ್ತ

ಜನನ ಮೃತಿಯುತಾನಾಂ ಸೇವಯಾ ದೇವತಾನಾಂ
ನಭವತಿ ಸುಖಲೇಶಸ್ಸಂಶಯೋ ನಾಸ್ತಿ ತತ್ರ ॥
ಅಜನಿಮಮೃತರೂಪಂ ಸಾಂಬಮೀಶಂ ಭಜಂತೇ।
ಯ ಇಹ ಪರಮಸೌಖ್ಯಂ ತೇಹಿ ಧನ್ಯಾ ಲಭಂತೇ ॥೮೩॥

### ಮತ್ತೇಭ ವಿಕ್ರೀಡಿತ

ಶರಮಾದಂ ವೃಷಭೇಶನಾದನರೆಮೆಯ್ಯಿಂ ಭಾರ್ಯೆಯಾದಂ ಲಸತ
ಕಿರಿಯುಂ ಮೋಹಿನಿಯುಂ ಮೃದಂಗವಹನುಂ ತಾನಾಗಿ ನಿನ್ನಂಶದಾ
ಹರಿ ನಿನ್ನಂಘ್ರಿಗೆ ಕಣ್ಣನರ್ಪಿಸುತಮೊಪ್ಪಿಂ ಪೂಜ್ಯರೊಳ್ ಪೂಜ್ಯನಾ-
ಗಿರುತಿರ್ಪಂ ! ಗಿರಿಜೇಶ, ನೋಡಲವನಿಂಪಾವಾತನಿರ್ಪಂ ಮಿಗಿಲ್ ?

### ವಾರ್ಧಿಕ ಷಟ್ಪದಿ

ಜನನ ಮರಣಂಗಳಿಂ ಕೂಡಿರ್ದ ದೇವರ್ಕ-
ಳನು ಬರಿದೆ ಭಕ್ತಿಯಿಂ ಸೇವಿಪುದರಿಂದಮೇ
ಳ್ಗೆನಿತು ಸುಖಮಾಗದೀ ಮಾತಿನೊಳ್ ಬಗೆಯುಲ್ಕೆ ಲೇಶ ಸಂದೇಹಮಿಲ್ಲ
ಜನನಮಿರದಿರ್ದಮರಣಾಗಿರ್ದ ಸಾಂಬನಂ
ಮನವೊಲ್ದು ಭಕ್ತಿಯಿಂದಂ ಸದಾ ಭಜಿಸುತಿಹೆ
ಜನರೆ ದಿಟವಾಗಿ ಧನ್ಯರವರ್ ಪರಮಸೌಖ್ಯಮಂ ಪಡೆವರಿಹದಲ್ಲಿಯೇ

## ಮಾಲಿನೀ ವೃತ್ತ

ಶಿವ ತವ ಪರಿಚರ್ಯಾ ಸನ್ನಿಧಾನಾಯ ಗೌರ್ಯಾ |
ಮಮ ಗುಣಧುರ್ಯಾಂ ಬುದ್ಧಿಕನ್ಯಾಂ ಪ್ರದಾಸ್ಯೇ ||
ಭುವನಬಂಧೋ ಸಚ್ಚಿದಾನಂದಸಿಂಧೋ
ಹೃದಯಗೇಹೇ ಸರ್ವದಾ ಸಂವಸ ತ್ವಂ ||೮೪||

## ಮಾಲಿನೀ ವೃತ್ತ

ಜಲಧಿಮಥನದಕ್ಷೋ ನೈವ ಪಾತಾಳಭೇದೀ |
ವನಮೃಗಯಾಯಾಂ ನೈವ ಲುಬ್ಧಪ್ರವೀಣಃ ||
ಕುಸುಮಭೂಷಾ ವಸ್ತ್ರಮುಖ್ಯಾಂ ಸಪರ್ಯಾಂ |
ಕಥಮಹಂ ತೇ ಕಲ್ಪಯಾನೀಂದುಮೌಳೇ ||೮೫||

## ಉತ್ಪಲಮಾಲಾ ವೃತ್ತ

ನಿನ್ನಯ ಸೇವೆಗೆಯ್ಯಲುಮೆಯೊಂದಿಗೆ ಎನ್ನಯ ಬುದ್ಧಿಯೆಂಬ ಸ- |
ಕೆಯಂ ಲಸದ್ಗುಣವಿರಾಜಿತೆಯಂ ನಯದಿಂದಮಿತ್ತಪೆಂ ! ||
ತ ಸಚ್ಚಿದಾತ್ಮಸುಖಸಿಂಧು ! ದಯಾನಿಧಿ ಲೋಕಬಂಧು ! ನೀ- |
ಮನೋಮಹಾಗೃಹದೊಳಾವಗಮುಂ ಪದಸಿಂದೆ ವಾಸಿಸೈ ! ||೮೪||

## ವಾರ್ಧಿಕ ಷಟ್ಪದಿ

ಕಡೆಯಲ್ ಸಮರ್ಥನಲ್ಲೈನಾಂ ಪಯೋನಿಧಿಯ- |
ಯಲುಮಶಕ್ತನಾ ಪಾತಾಳ ಲೋಕಮಂ |
ಪಿಂದರಣ್ಯಮೃಗಬೇಂಟೆಯಾಡಲ್ ಬಿಯದರಲ್ಲಿ ಬಲ್ಲಿದನಲ್ಲವು ||
ರದೊಳಾಂ ನಿನ್ನನಶನ ಕುಸುಮಂಗಳಿಂ
ಗೆಯುಡುಗೆಗಳಿಂದದೆಂತು ಸೇವಿಸುವೆನೆ-
ಡೆಯ ! ನೀಂ ಕರುಣಿಸೈ ! ನಂಜುಂಡ, ಶಶಿಚೂಡ, ಫಣಿಭೂಷ,
ಕೃತ್ತಿವಾಸ ||೮೫||

ಶಾರ್ದೂಲ ವಿಕ್ರೀಡಿತ ವೃತ್ತ

ಪೂಜಾದ್ರವ್ಯಸಮೃದ್ಧಯೋ ವಿರಚಿತಾಃ ಪೂಜಾಂ ಕಥಾಂ ಕು
ಪಕ್ಷಿತ್ವಂ ನಚ ವಾ ಕಿಟಿತ್ವಮಪಿ ನ ಪ್ರಾಪ್ತಂ ಮಯಾ ದುರ್ಲಭಂ ||
ಜಾನೇ ಮಸ್ತಕಮಂಘ್ರಿಪಲ್ಲವ ಮುಮಾಜಾನೇ ನ ತೇಹಂ ವಿಭೋ |
ನ ಜ್ಞಾತಂ ಹಿ ಪಿತಾಮಹೇನ ಹರಿಣಾ ತತ್ವೇನ ತದ್ರೂಪಿಣಾ ||೮೬

ಮಾಲ್ಯಭಾರಾ ವೃತ್ತ

ಅಶನಂ ಗರಳಂ ಫಣೀ ಕಲಾಪೋ
ವಸನಂ ಚರ್ಮಚ ವಾಹನಂ ಮಹೋಕ್ಷಃ ||
ಮಮ ದಾಸ್ಯಸಿ ಕಿಂ ಕಿಮಸ್ತಿ ಶಂಭೋ|
ತವಪಾದಾಂಬುಜಭಕ್ತಿಮೇವ ದೇಹಿ ||೮೭||

ಚಂಪಕಮಾಲಾ ವೃತ್ತ

ಮೊರೆಕಿಪೆನರ್ಚನೋಪಕರಣಾಳಿಯನಾದೊಡದೆಂತು ಪೂಜೆಯ
ವಿರಚಿಪೆನಂಚೆಪಂದಿಗಳ ರೂಪವನಾಂ ತಳೆಯಲ್ಕೆ ಸಾಧ್ಯಮೇ ? ||
ಅರಿವೆನೆ ? ತತ್ತದಾಕೃತಿಗಳಂ ಸಲೆ ತಾಳ್ದ ವಿಧಾತೃವಿಷ್ಣುಗಳ್ |
ನಿರುಕಿಸದಿರ್ದ ನಿನ್ನ ಶಿರಮಂ ಚರಣಂಗಳನಾಂ ಶಿವಾಧವಾ ! ||೮೮||

ಮತ್ತೇಭ ವಿಕ್ರೀಡಿತ ವೃತ್ತ

ಗರಳಂ ನಿನ್ನಶನಂ, ಮಹೋಗ್ರತರ ಸರ್ಪವ್ರಾತಾಮೇ ಸುಂದರಾ-
ಭರಣಂ ಚರ್ಮವೆ ಚೆಲ್ವ ಬಟ್ಟೆ ಮುದಿಯೆತ್ತೇ ವಾಹನಂ, ಮಾರಸಂ- ||
ಹರನೇ ನೀನೊಲಿದೇನನೀವೆ ? ಕೊಳಲಾನೇನಿರ್ಪುದೈ? ನಿನ್ನ ಪ- |
ತ್ಕರಣಾಂಭೋರುಹ ಭಕ್ತಿಯೊಂದನೆನಗೀಯೈ ನೀಂ ದಯಾಸಾಗರಾ!

### ವಂಶಸ್ಥ ವೃತ್ತ

ಯದಾ ಕೃತಾಂಭೋನಿಧಿ ಸೇತುಬಂಧನಃ
ಸ್ಥಲಾಧಃ ಕೃತ ಪರ್ವತಾಧಿಪಃ ||
ಾಸಿ ತೇ ಲಂಘಿತಪದ್ಮಸಂಭವ|
ಾ ಶಿವಾರ್ಚನಸ್ತ್ರವ ಭಾವನಾಕ್ಷಮಃ ||೨೮||

### ಮಾಲ್ಯಭಾರಾ ವೃತ್ತ

ನತಿಭಿರ್ನುತಿಭಿಸ್ತ್ವಮೀಶಪೂಜಾ
ಭಿಧ್ಯಾನ ಸಮಾಧಿಭಿರ್ನತುಷ್ಟಃ ||
ುಷಾ ಮುಸಲೇನ ಚಾಶ್ಮಭಿರ್ವಾ,
ತೇ ಪ್ರೀತಿಕರಂ ತಥಾ ಕರೋಮಿ ||೬೯||

### ಚಂಪಕಮಾಲಾ ವೃತ್ತ

ಜಲಧಿಗೆ ಸೇತುಬಂಧನವನೆಂದು ನೆಗಳ್ವೆನೊ ಹಸ್ತದಿಂದೆ ಕೀ-
ೀಗೆಯದೆಂದಿಗೊತ್ತುವೆನೊ ಶೀಘ್ರದೊಳುನ್ನತ ಪರ್ವತೇಂದ್ರನಂ, ||
ಲಜಜನಂ ದಲೆಂದು ಪೆರಸಾರ್ಚುವೆನೆಂದೆ ಕಪರ್ದಿ! ನಿನ್ನನಾಂ |
ುಗೆಯಿನರ್ಚಿಸಲ್, ನುತಿಸಲುಂ ನೆನೆಯಲ್ಕೆ ಸಮರ್ಥನಪ್ಪೆನೈ! ||೮೦||

### ಮತ್ತೇಭ ವಿಕ್ರೀಡಿತ ವೃತ್ತ

ಲಸೂಳ್ ಪ್ರಾರ್ಥಿಸಿದೆಂ, ಸಮರ್ಚಿಸಿದೆನೊಳ್ಪಿಂ ವಂದನಂಗೆಯ್ದನಾಂ |
ಲವಿಂಧ್ಯಾನಸಮಾಧಿಯಾಂತೆನಕಟಾ! ನೀನೊಲ್ದುದಿಲ್ಲಿನ್ನೆಗಂ ||
ಲೆಪೇಳ್ ನೀಂ ಪರಿತುಷ್ಟನಪ್ಪಬಗೆಯಂ! ಪೇಳ್ದಂತೆ ನಾಂ ಗೆಯ್ವಪೆಂ
ಲೆಯಿಂದೋ! ಧನುವಿಂದೋ ಮೇಣೊನಕೆಯಿಂದೊ ಪೇಳ್ ಭವಾನೀಧವಾ
||೮೧||

ಮಾಲ್ಯಭಾರಾ ವೃತ್ತ

ವಚಸಾ ಚರಿತಂ ವದಾಮಿ ಶಂಭೋ |
ರಹಮುದ್ಯೋಗವಿಧಾಸು ತೇಽ ಪ್ರಸಕ್ತಃ ||
ಮನಸಾಕೃತಿಮಾಶ್ವರಸ್ಯ ಸೇವೇ |
ಶಿರಸಾ ಚೈವ ಸದಾಶಿವಂ ನಮಾಮಿ ||೯೦||

ಶಾಲಿನೀ ವೃತ್ತ

ಆದ್ಯಾವಿದ್ಯಾ ಹೃದ್ಗತಾ ನಿರ್ಗತಾಸೀತ್
ವಿದ್ಯಾ ಹೃದ್ಯಾ ಹೃದ್ಗತಾ ತ್ವತ್ಪ್ರಸಾದಾತ್ ||
ಸೇವೇ ನಿತ್ಯಂ ಶ್ರೀಕರಂ ತ್ವತ್ಪದಾಬ್ಜಂ
ಭವೇ ಮುಕ್ತೇರ್ಭಾಜನಂ ರಾಜಮೌಳೇ ||೯೧||

ತರಳೆ ವೃತ್ತ

ಪರಮಯೋಗವಿಧಂಗಳಲ್ಲಿ ತೊಡಂಗದಿದ್ದುದರಿಂ ಮಹೇ-
ಶ್ವರನ ಸಚ್ಚರಿತಂಗಳಂ ನುಡಿಯಿಂದೆ ವಾಚಿಸೆನಾವಗಂ ||
ಪುರಹರಾಂಘ್ರಿಯುಗಕ್ಕೆ ಮಸ್ತಕದಿಂದೆ ವಂದಿಸುತಿರ್ಪೆನೀ ||
ಶ್ವರನ ಮೂರ್ತಿಯನೆನ್ನ ಮಾನಸದಿಂದೆ ಸೇವಿಸುತಿರ್ಪೆನಾಂ ||೯೦||

ವಾರ್ಧಿಕ ಷಟ್ಪದಿ

ಘನಮಹಿಮ ! ನಿನ್ನನುಗ್ರಹದ ಬಲದಿಂದೆನ್ನ
ಮನದೊಳಿರ್ದಜ್ಞಾನಮಿರದೆ ಪೊರಮಟ್ಟು ಪೋ-
ಯ್ತನುಗೊಂಡಲಭ್ಯತರ ಸುಜ್ಞಾನಮಾಗಳದರೊಳ್ ನೆಲಸಿನಿಂತಿರ್ಪುದು,
ನೆನೆಯುತಿರ್ಪೆಂ ! ಸಂತತಂ ಸಿರಿಯನೀವ ಪಾ-
ವನ ಪರಮ ಮುಕ್ತಿಪದಮಂ ಕೊಡುವ ನಿನ್ನಂಘ್ರಿ
ವನಜಮಂ, ಮನದೊಳಾಂ ಭಕ್ತಿಯಿಂದಂ ಬಿಡದೆ ಬಾಲೇಂದು ಚೂಡಾ-
ಮಣೇ ! ||

ವಸಂತತಿಲಕ ವೃತ್ತ

ದೂರೀಕೃತಾನಿ ದುರಿತಾನಿ ದುರಕ್ಷರಾಣಿ |
ರ್ಭಾಗ್ಯದುಃಖ ದುರಹಂಕೃತಿದುರ್ವಚಾಂಸಿ ||
ಂ ತ್ವದೀಯಚರಿತಂ ನಿತರಾಂ ಪಿಬಂತಂ |
ಶ ಮಾಮಿಹ ಸಮುದ್ಧರ ಸತ್ಕಟಾಕ್ಷೈಃ ||೯೨||

ಆರ್ಯಾ

ಸೋಮ ಕಳಾಧರ ಮೌಳೌ |
ಮಲ ಘನಕಂದರೇ ಮಹಾಮಹಸಿ ||
ುನಿ ಗಿರಿಜಾನಾಥೇ
ಮಕ ಹೃದಯಂ ನಿರಂತರಂ ರಮತಾಂ ||೯೩||

ಮತ್ತೇಭ ವಿಕ್ರೀಡಿತ ವೃತ್ತ

ಪೆರಸಾರ್ದೋಡಿದುವೀಗಳೆನ್ನ ದುರಿತಂಗಳ್ ದುರ್ವಚಂಗಳ್ ಮಹಾ |
ಹಂಕಾರ ದುರಕ್ಷರಂಗಳಿರವೇ ದುರ್ಭಾಗ್ಯದುಃಖಂಗಳುಂ, ||
ತಂ ನಿನ್ನಯ ಸಚ್ಚರಿತ್ರಸುಧೆಯಂ ಸಂತೋಷದಿಂದೀಂಟಲಾಂ |
ಜಾವಲ್ಲಭ ! ನೀಂ ಸಮುದ್ಧರಿಪುದೆನ್ನಂ ಸತ್ಕಟಾಕ್ಷಂಗಳಿಂ ||೯೨||

ಕಂದ

ಸೋಮಕಳೋತ್ತಂಸನೊಳಾ
ೀಮಲ ಘನಗಳನೊಳಲಘು ತೇಜೋಮಯನೊಳ್ ||
ಮದ್ಗಿರಿಜಾಧವನೊಳ್
ಮಿಯೊಳನಿಶಂ ವಿರಮಿಸುತಿರ್ಕೆನ್ನ ಮನಂ ||೯೩||

ಆರ್ಯಾ

ಸಾ ರಸನಾ ತೇ ನಯನೇ
ತಾವೇವ ಕರೌ ಸ ಏವ ಕೃತಕೃತ್ಯಃ ||
ಯಾ ಯೇ ಯೌ ಯೋ ಭರ್ಗಂ
ವದತೀಕ್ಷೇತೇ ಸದಾಂರ್ಚತಸ್ಸ್ಮರತಿ ||೯೪||

ಆರ್ಯಾ

ಅತಿಮೃದುಲೌ ಮಮಚರಣಾ.
ವತಿ ಕಠಿನಂ ತೇ ಮನೋ ಭವಾನೀಶ ||
ಇತಿ ವಿಚಿಕಿತ್ಸಾಂ ಸಂತ್ಯಜ
ಶಿವ ಕಥಮಾಸೀದ್ಗಿರೌ ತಥಾ ಪ್ರವೇಶಸ್ತೇ ||೯೫||

ಮತ್ತೇಭ ವಿಕ್ರೀಡಿತ

ಅದುವೇ ನಾಲಗೆ ಯಾವುದಾವಗಮುಮೀಶಸ್ತೋತ್ರಮಂ ಮಾಳ್ಪು
ಮುದದಿಂದಾವುವು ನೋಳ್ಪುವೀಶನನವೇ ಕಣ್ಗಳ್ ಸದಾ ಸಾಂಬನಂ ||
ಪದಪಿಂದಾವುವು ಪೂಜೆಗೆಯ್ವುವನೆ ಕಯ್ಗಳ್ ನಾಡೆ ಭಕ್ತ್ಯಾತಿರೇ-|
ಕದಿನಾವಂ ಸ್ಮರಿಪಂ ಸದಾ ಶಿವನನಾತಂ ಧನ್ಯನೈ! ಲೋಕದೊಳ್ ||೯

ಕಂದ

ಅತಿಮೃದು ವೆನ್ನಡಿಗಳ್ ಮೇ-|
ಣತಿಕಠಿಣಂ! ನಿನ್ನ ಮನಮೆನುತ್ತಂ ಗಿರಿಜಾ- ||
ಪತಿ! ಶಂಕಿಪುದಂ ತೊರೆ! ಪ-
ರ್ವತನೊಳದೆಂತಕ್ಕು! ನಿನ್ನ ಸಂಚಾರಂ ಪೇಳ್ ||೯೫||

ಆರ್ಯಾ

ಧೈರ್ಯಾಂಕುಶೇನ ನಿಭೃತಂ
ದಾಕೃಷ್ಯ ಭಕ್ತಿಶೃಂಖಲಯಾ ||
ರ ಚರಣಾಲಾನೇ
ರು ಮದೇಭಂ ಬಧಾನ ಚಿದ್ಯಂತ್ರೈಃ ||೯೬||

ಮಾಲ್ಯಭಾರಾ ವೃತ್ತ

ಪ್ರಚರತ್ಯಭಿತಃ ಪ್ರಗಲ್ಭವೃತ್ತ್ಯಾ |
ಾನೇಷ ಮನಃಕರೀ ಗರೀಯಾನ್ ||
ಹ್ಯ ನಯೇನ ಭಕ್ತಿರಜ್ಜ್ವಾ
ಸ್ಥಾಣುಪದಂ ದೃಢಂ ನಯಾಮುಮ್ || ೯೭ ||




ಕಂದ

ಅಂಕೆಯೊಳು ತಂದು ಸಲೆ ಧೈ-
ುಶದಿಂ ಜಗ್ಗಿ ಭಕ್ತಿಶೃಂಖಲೆಯಿಂದಂ ||
ನೆ ! ಜ್ಞಾನಯಂತ್ರದಿ,
ಟ್ಟಡಿಗಂಬಿಕೀ ಮನೋಮದಗಜಮಂ || ೯೬ ||

ಚಂಪಕಮಾಲಾ ವೃತ್ತ

ತಿರುಗುತ ಮಿರ್ಪುದೊಂದೆಡೆಗೆ ನಿಲ್ಲದೆ ಸ್ವೈರದೆ ಸುತ್ತುಮುತ್ತಲುಂ |
ಿಯೊಾದ ಮಾನಸಮೆನಿಪ್ಪ ಮಹಾಮದಯುಕ್ತವಾರಣಂ ||
ಯೊಳೊಲ್ಮೆಯಿಂ ಪಿಡಿದಿದಂ ಸ್ಥಿರಭಕ್ತಿಯೆನಿಪ್ಪ ಪಾಶದಿಂ |
ರ ದಾರ್ಢ್ಯದಿಂದೆಸೆವ ಸ್ಥಾಣುಪದಕ್ಕೆಳದೊಯ್ದು ಬಂಧಿಸಯ್ || ೯೭ ||

### ಸ್ರಗ್ಧರಾ ವೃತ್ತ

ಸರ್ವಾಲಂಕಾರಯುಕ್ತಾಂ ಸರಳಪದಯುತಾಂ ಸಾಧುವೃ
ಸದ್ಭಿಸ್ಸಂಸ್ತೂಯಮಾನಾಂ ಸರಸಗುಣಯುತಾಂ ಲಕ್ಷಿತಾಂ
ಉದ್ಯದ್ಭೂಷಾ ವಿಶೇಷಾಮುಪಗತವಿನಯಾಂ ದ್ಯೋತಮಾ
ಕಲ್ಯಾಣೀಂ ದೇವ ಗೌರೀಪ್ರಿಯ ಮಮಕವಿತಾಕನ್ಯಕಾಂತ್ವಂ

### ಶಿಖರಿಣೀ ವೃತ್ತ

ಇದಂ ತೇ ಯುಕ್ತಂ ವಾ ಪರಮಶಿವ ಕಾರುಣ್ಯ ಜಲ
ಗತೌ ತಿರ್ಯಗ್ರೂಪಂ ತವಪದಶಿರೋದರ್ಶನಧಿಯಾ ||
ಹರಿಬ್ರಹ್ಮಾಣೌ ತೌ ದಿವಿ ಭುವಿ ಚರಂತೌ ಶ್ರಮಯುತೌ |
ಕಥಂ ಶಂಭೋ ಸ್ವಾಮಿನ್ ಕಥಯ ಮಮ ವೇದ್ಯೋಽಸಿ ಪ

### ಮತ್ತೇಭ ವಿಕ್ರೀಡಿತ

ಸಕಲಾಲಂಕೃತೆಯಂ ಸುವರ್ಣಯುತೆಯಂ ಸನ್ಮಾನ್ಯಸ
ಪ್ರಕಟಾರ್ಥೋತ್ತಮರೀತಿಯಂ ಪದವಿಶುದ್ಧತ್ವಾದಿ ಕಲ್ಯಾಣ
ಯುಕ ಸಲ್ಲಕ್ಷಣೆಯಂ ನಯಾನ್ವಿತೆಯನೆನ್ನೀ ಪದ್ಯರೂಪೀ ಸು
ನ್ನಿಕೆಯಂ ಸದ್ಗುಣಯುಕ್ತೆಯಂ ಗ್ರಹಿಸು ನೀಂ ಶ್ರೀಪಾರ್ವತೀ

### ಚಂಪಕಮಾಲಾ

ಪರಮ ಕೃಪಾರ್ಣವಾ ! ನಿನಗಿದೊಪ್ಪುವುದೇ ? ಪಶು
ಧರಿಸುತೆ ಪೂರ್ಕ್ಷೆಯಿಂ ತೆರಳ್ದು ನಿನ್ನಡಿಯಂ ಮುಡಿಯಂ ನಿ
ಹರಿವಿಧಿಗಳ್ ತೊಳಲ್ದು ನೆಲ-ಬಾನ್ಗಳೊಳಾಂತರತಿ ಪ್ರಯ
ಕರುಣನೊಳೀಗಳೆನ್ನ ದುರ್ಗದೆಂತೆಸೆದಿರ್ಪೆ ? ಪೇಳ್ ಸದಾಶಿ

ಶಾರ್ದೂಲ ವಿಕ್ರೀಡಿತ

ಸ್ತೋತ್ರೇಣಾಲಮಹಂ ಪ್ರವಚ್ಮಿ ನಮೃಷಾ ದೇವಾ ವಿರಿಂಚಾದಯಃ |
ತ್ಯಾನಾಂ ಗಣನಾ ಪ್ರಸಂಗ ಸಮಯೇ ತ್ವಾಮಗ್ರಗಣ್ಯಂವಿದುಃ ||
ಹಾತ್ಮ್ಯಾಗ್ರವಿಚಾರಣ ಪ್ರಕರಣೇ ಧಾನಾತುಷ ಸ್ತೋಮವ |
ತಾಸ್ತ್ವಾಂ ವಿದುರುತ್ತಮೋತ್ತಮಫಲಂ ಶಂಭೋ ಭವತ್ಸೇವಕಾಃ ||೧೦೦||

ವಾರ್ಧಿಕ ಷಟ್ಪದಿ

ಇನ್ನು ಸ್ತೋತ್ರಂ ಸಾಕು ! ದೇವಾಧಿದೇವ ! ಶಿವ !
ಯನೆ ನುಡಿದಪೆಂ ! ಬ್ರಹ್ಮಾದಿ ನಿರ್ಜರರ್
ನ್ನತ್ಯರಂ ಗಣನೆಗೆಯ್ವಾಗಳೆಣಿಸಿದರ್ ಮೊದಲಿಗನೆನುತ್ತೆ ನಿನ್ನಂ ||
ನ್ನತೋನ್ನತವಾದ ಮಾಹಾತ್ಮ್ಯಮಂ ಮನದೊ-
ನ್ನಿಸಲ್ಕವರೆಲ್ಲರುಂ ಗೊಳಲಿಯೋಲ್ ಪಾರೆ
ನ್ನಂ ತಿಳಿದರುತ್ತಮೋತ್ತಮತರದ ಧಾನ್ಯದಂತೆ ನಿನ್ನಯ ಭಕ್ತರು ||೧೦೦||

● ಸಮಾಪ್ತ ●